ಜಯತು ಭಗವಾ೯

ಬಾಲಸರಸ್ವತೀ ಗ್ರಂಥಮಾಲಾ

---

# ಪ್ರಭಾವಳಿ

೨

# ಶೋಭನೆ

(ಗೃಹಚಿತ್ರ)



ಬಾಲಸರಸ್ವತಿ

ಜಯತು ಭಗವಾನ್

**ಬಾಲಸರಸ್ವತೀ ಗ್ರಂಥಮಾಲಾ**

---

# ಪ್ರಭಾವಳಿ

## ೩

# ಶೋಭನೆ

( ಗೃಹಚಿತ್ರ )




ವಿದ್ವಾನ್

**ವಿದ್ಯಾಭೂಷಣ ಬಾಲಸರಸ್ವತಿಯವರಿಂದ**

ವಿರಚಿತವಾದುದು


---


ಮೂರನೆಯ ಮುದ್ರಣ

---

ಬೆಂಗಳೂರು

ವಿ. ಸೈಡ್ ಅಂಡ್ ಕಂಪೆನಿ, ಪವರ್ ಪ್ರೆಸ್ಸಿನಲ್ಲಿ

ಮುದ್ರಿಸಲ್ಪಟ್ಟಿತು.

Price 0-12-0.] **1931** [ಬೆಲೆ ೦-೧೨-೦.

Publisher,

**G. Siddappa, Photographer,**

BANGALORE CITY.

ಸೋಲ್ ಏಜಂಟರು,

**ಕೆ. ಎ. ಚೌರಪ್ಪ ಅಂಡ್ ಸನ್ಸ್,**

**ಪುಸ್ತಕ ವ್ಯಾಪಾರಿಗಳು,**

ಅವೆನ್ಯೂ ರೋಡ್, ಬೆಂಗಳೂರು ಸಿಟಿ.



ಶ್ರೀಯುತ ವಿದ್ವಾನ್ ವಿದ್ಯಾಭೂಷಣ
ಬಾಲಸರಸ್ವತೀ.

# ವಿಜ್ಞಾಪನೆ.

---

ಶೋಭನೆಯೆಂಬ ಈ ಗ್ರಂಥವು ನನ್ನ ಪ್ರಥಮಪ್ರಯತ್ನವು. ಇದು ಮೈಸೂರಿನ ಕರ್ಣಾಟಕಚಂದ್ರಿಕೆಯೆಂಬ ಮಾಸಪುಸ್ತಕದಲ್ಲಿ ಬಹುಕಾಲದ ಹಿಂದೆ ಮುದ್ರಿತವಾದುದು. ಈ ಗೃಹಚಿತ್ರವು ಉಜ್ಜ್ವಲವಾದ ವರ್ಣಗಳಿಂದ ಶೋಭಿಸುತ್ತಿರುವುದರಿಂದ, ಈ ಗ್ರಂಥವನ್ನು ಮತ್ತೆ ಪ್ರಕಾಶಕ್ಕೆ ತರಬೇಕೆಂದು ನನ್ನ ಅನೇಕ ಮಿತ್ರಮಹಾಶಯರು ಸೂಚಿಸಿದುದರ ಮೇಲೆ, ನಾನು ಈ ಗ್ರಂಥವನ್ನು ಮತ್ತೊಂದು ಸಲ ಮುದ್ರಿಸಿ ವಾಚಕ ಮಹಾಶಯರಲ್ಲಿ ಮುಂದಿಟ್ಟಿರುವೆನು.

ಈ ಕಥೆಯು ಅದೊಂದು ಗೃಹಚಿತ್ರವನ್ನು ಅವಲಂಬಿಸಿಕೊಂಡು ರಚಿಸಲ್ಪಟ್ಟುದಾಗಿರುವುದು. ಈ ಗ್ರಂಥದಲ್ಲಿನ ರಚನಾಕೌಶಲವು ಅನೇಕರಿಗೆ ಅಷ್ಟಾಗಿ ಹೃದಯಂಗಮವಲ್ಲದಿದ್ದರೂ, ಚಿತ್ರವು ಪವಿತ್ರವಾದ ಭಾವನೆಯಿಂದ ಕೂಡಿದುದಾಗಿರುವುದು. ಈ ಗ್ರಂಥದಲ್ಲಿ ಪತಿಪರಾಯಣತೆ, ಹಾಗೂ ಪಾತಿವ್ರತ್ಯ ರಕ್ಷಣೆ ಇವೆರಡೂ ಸಮಾನವ್ಯಾಪನೆಯುಳ್ಳ ಕಥಾಸಂವಿಧಾನವಾಗಿರುವುದು. ಈ ಉಭಯಾತ್ಮಕವಾದ ಸೂತ್ರದಲ್ಲಿ ಇಂದಿರಾಶೋಭನೆಯರೆಂಬ ಜೀವರತ್ನಗಳೆರಡೂ ಪರಸ್ಪರವ್ಯಾಘಾತವಿಲ್ಲದೆ ಪೋಣಿಸಲ್ಪಟ್ಟಿರುವುದರಿಂದ, ವಾಚಕ ಮಹಾಶಯರಿಗೆ ಬೇಸರವನ್ನುಂಟುಮಾಡಲಾರದೆಂದು ಗ್ರಂಥಕಾರರ ಭಾವನೆಯು. ಸ್ತ್ರೀಯರು ನಮ್ಮ ಇಂದಿರಾ ಶೋಭನೆಯರಿಂದ ಪ್ರೇಮಬೀಜ, ಪ್ರೇಮಾಂಕುರಗಳನ್ನು ಪಡೆದುಕೊಂಡು ತಮ್ಮ ತಮ್ಮ ಹೃದಯಾಲವಾಲಗಳಲ್ಲಿ ನಟ್ಟು ಪ್ರೇಮರಸದ ಸೇಚನೆಯಿಂದ ನಿರಂತರವೂ ಕಾಪಿಡುತ್ತಾ ಅದರ ಪ್ರೇಮಫಲವನ್ನು ಸೇವಿಸಿ ಆನಂದಿಸುವುದಾದರೆ, ಗ್ರಂಥಕಾರರ ಶ್ರಮವು ಅಂದಿಗೆ ಸಾರ್ಥಕವೆನಿಸುವುದು.

ಇತಿ ವಿದ್ವಜ್ಜನವಶಂವದ,

೨೨—೧೨—೧೯೩೧, ಮೈಸೂರು.

**ಬಾಲಸರಸ್ವತಿ,**
ಗ್ರಂಥಕರ್ತಾ.

ಜಯತು ಭಗವಾನ್

**ಬಾಲಸರಸ್ವತೀ ಗ್ರಂಥಮಾಲಾ**

---

# ಪ್ರಭಾವಳಿ

## ೩

# ಶೋಭನೆ

---

### ಒಂದನೆಯ ಪರಿಚ್ಛೇದ

ನಂದನಪುರವು ಒಂದು ಸಣ್ಣ ಗ್ರಾಮ. ಗ್ರಾಮವು ಸಣ್ಣದಾದರೂ, ಅಲ್ಲಿ ಅನೇಕಜನ ದೊಡ್ಡ ಮನುಷ್ಯರು ವಾಸಮಾಡಿಕೊಂಡಿದ್ದರು. ಆ ಗ್ರಾಮದ ಪಕ್ಕದಲ್ಲಿಯೇ ಒಂದು ದೊಡ್ಡದಾದ ನದಿಯು ಹರಿಯುತಲಿದ್ದಿತು. ನದಿಯ ಹೆಸರು ವಿಶಾಲಾಕ್ಷಿ. ವಿಶಾಲಾಕ್ಷಿಯು ಬಹಳವಾಗಿ ಚಪಲೆ, ಅಲ್ಲದೇ ಅಭಿಮಾನಿನಿ. ವಾಯುವು ಸ್ವಲ್ಪ ಆಘಾತವನ್ನುಂಟುಮಾಡಿದರೂ ತೀರದಲ್ಲಿ ಬಂದು ತನ್ನ ಮನೋವ್ಯಥೆಯನ್ನು ಜಗತ್ತಿಗೆ ತೋರ್ಪಡಿಸಿಕೊಳ್ಳುವಳು. ವಿಶಾಲಾಕ್ಷಿಯು ಯಾವಾಗಲೂ ಯೌವನದಿಂದ ಪರಿಪೂರ್ಣೆಯು. ಪೂರ್ಣಯೌವನದಿಂದ ತುಂಬಿದ ದೇಹದಲ್ಲಿ ಮನೋಮುಗ್ಧಕರವಾದ ಸೌಂದರ್ಯವು ಹೇಗೆ ತಳತಳಿಸುವುದೋ, ಹಾಗೆಯೇ ವಿಶಾಲಾಕ್ಷಿಯಲ್ಲಿಯೂ ಅನಿರ್ವಚನೀಯವಾದದೊಂದು ಸೌಂದರ್ಯವು ನೋಟಕರ ಮನಸ್ಸನ್ನು ಮುಗ್ಧವಾಗಿ ಮಾಡುತಲಿದ್ದಿತು.

ಈ ನಂದನಪುರದಲ್ಲಿಯೇ ರಮೇಶಬಾಬುವು ವಾಸವಾಗಿರುತಿದ್ದನು. ರಮೇಶನು ಜಾತಿಯಲ್ಲಿ ಬ್ರಾಹ್ಮಣ. ಅವನು ಆ ಗ್ರಾಮದಲ್ಲಿ ಒಬ್ಬ ಧನವಂತನಾದ ದೊಡ್ಡಮನುಷ್ಯನು. ಅವನ ಮನೆಯು ದೊಡ್ಡದಾಗಿಯೂ ಸುಂದರವಾಗಿಯೂ ಇದ್ದಿತು. ಮನೆಯ ಸುತ್ತಲೂ ಹೂದೋಟ. ತೋಟದ ಸುತ್ತಲೂ ಪ್ರಾಕಾರದ ಗೋಡೆ. ಮನೆಯ ಪಶ್ಚಾದ್ಭಾಗದಲ್ಲಿ ಒಂದು ಸುಂದರವಾದ ಪುಷ್ಕರಿಣಿ. ಪುಷ್ಕರಿಣಿಯ ಎರಡುಕಡೆಯಲ್ಲಿಯೂ ಸೋಪಾನಗಳು. ಕೊಳದ ಸುತ್ತಲೂ ತಟದಲ್ಲಿ

---

ವಿದ್ವಾನ್ ವಿದ್ಯಾಭೂಷಣ ಬಾಲಸರಸ್ವತಿಯವರಿಂದ ವಿರಚಿತವಾದುದು.

ಹಸುರು ಹುಲ್ಲು ಮನೋಹರವಾಗಿ ಬೆಳದಿರುವುದು. ಮಧ್ಯಮಧ್ಯದಲ್ಲಿ ನಾನಾ ಜಾತಿಯ ವೃಕ್ಷಗಳು ಗಗನವನ್ನು ಮುಟ್ಟುವಂತೆ ಬೆಳೆದಿದ್ದುವು. ಕೊಳದಲ್ಲಿ ಸುಂದರವಾದ ಕಮಲಗಳು ಮಂದಾನಿಲನಿಂದ ಆಂದೋಳನಮಾಡುತಲಿದ್ದುವು. ಅವುಗಳಲ್ಲಿ ಕೆಲವು ಅರಳಿದ್ದುವು, ಕೆಲವು ಅರಳುತಿದ್ದುವು.

ಈದಿನ ನಾವು ರಮೇಶನ ಮನೆಯ ಒಳಗೆ ಪ್ರವೇಶಮಾಡೋಣ. ಹೊರಗಿನ ಮಹಲಿಗಿಂತಲೂ ಒಳಗಿನ ಮಹಲು ಅನೇಕಜನಗಳಿಂದ ನಿಬಿಡಿತವಾಗಿರುವುದು. ಒಳಗಿನ ಮಹಲು ಹೊರಗಿನ ಮಹಲಿಗಿಂತಲೂ ದೊಡ್ಡದಾಗಿಯೂ ನೋಡುವುದಕ್ಕೆ ಅಂದವಾಗಿಯೂ, ಸುಸಜ್ಜಿತವಾಗಿಯೂ ಇರುವುದು.

ಈ ದಿನ ರಮೇಶನ ಮಗನಿಗೆ ಅನ್ನಪ್ರಾಶನ. ಈ ಸಂತೋಷದ ಮಧ್ಯದಲ್ಲಿ ಅವನು ಸ್ವಲ್ಪ ವ್ಯಸ್ತನಾಗಿದ್ದನು. ಸಂಬಂಧಿಗಳೂ, ಸಂಬಂಧಿಗಳಲ್ಲದವರೂ, ಕರೆಯಿಸಿಕೊಂಡವರೂ, ಕರೆಯಿಸಿಕೊಳ್ಳದವರೂ ಎಲ್ಲರೂ ಬಂದಿರುವರು. ಕರೆಯ ದಿದ್ದರೂ ನಾವೂ ಆ ಮನೆಯೊಳಗೆ ಪ್ರವೇಶಮಾಡಿರುವೆವು. ಈ ದಿನ ಮನೆಯವ ರೆಲ್ಲರೂ ಸಂತೋಷದಿಂದ ತುಂಬಿಹೋಗಿರುವರು. ದಾಸದಾಸೀಜನ ಮೊದ ಲ್ಗೊಂಡು ಎಲ್ಲರೂ ಹೊಸದಾದ ವಸ್ತ್ರವನ್ನು ಧಾರಣೆಮಾಡಿ ತಮ್ಮತಮ್ಮ ಕೆಲಸದಲ್ಲಿ ಆಸಕ್ತರಾಗಿರುವರು. ಬಂದ ಸ್ತ್ರೀಯರೆಲ್ಲರೂ ಗುಂಪುಕಟ್ಟಿಕೊಂಡು ಏಕತ್ರ ಕುಳಿ ತಿರುವರು. ಇದನ್ನು ನೋಡಿದಮೇಲೆ ಅದಾಲತ್ ಪ್ರಿವಿಕೌನ್ಸಿಲ್ ನೋಡ ಬೇಕಾದ ಆವಶ್ಯಕವಿರುವುದಿಲ್ಲ. ಹೆಂಗುಸರು ಒಬ್ಬರನ್ನೊಬ್ಬರು ಮೀರಿಸುವಂತೆ, ವೇಷಭೂಷಣಗಳನ್ನು ಧಾರಣ ಮಾಡಿ ವಿಕಸಿತವಾದ ಕಮಲ ಪುಷ್ಪದಂತೆ ಶೋಭಿ ಸುತಲಿರುವರು. ಎಲ್ಲರೂ ಸರಸಸಲ್ಲಾಪಗಳನ್ನು ಮಾಡಲಾರಂಭಿಸಿದರು. ಕೆಲವು ಕಡೆ, ಮಹಿಳೆಯರು ಹಸುನ್ಮುಖಿಗಳಾಗಿ ತಮ್ಮ ಯಜಮಾನರಿಗೆ ಎಷ್ಟರಮಟ್ಟಿನ ವಿಶ್ವಾಸವಿರುವುದೆಂಬುದನ್ನು ತೋರ್ಪಡಿಸುತ್ತಿರುವರು. ಮತ್ತೆ ಕೆಲವರು ನಿರ್ಭಾ ಗ್ಯನಾದ ಪತಿಯ ದೆಸೆಯಿಂದ ತಾವು ಪಡುತಲಿರುವ ಕಷ್ಟವನ್ನು ಮನಸ್ಸುಕರಗು ವಂತೆ ವರ್ಣನೆಮಾಡುತಲಿರುವರು. ಮತ್ತೆ ಕೆಲವರು ಪತಿಯ ಗುಣಾಪಗುಣ ಗಳನ್ನು ಅನುವಾದನಮಾಡುತಲಿರುವರು. ಇನ್ನು ಕೆಲವರು, ಪ್ರತಿಕೂಲರಾದ ಪತಿಗಳನ್ನು ಸ್ವಾಧೀನಪಡಿಸಿಕೊಳ್ಳಲು ತಕ್ಕುದಾದ ವಶೀಕರಣವಿದ್ಯೆಯ ಉಪ ದೇಶವನ್ನು ತೆಗೆದುಕೊಳ್ಳುತಲಿರುವರು. ಮುಖ್ಯವಾಗಿ ಆ ಸಭೆಯಲ್ಲಿ ಪತಿಯ ವಿಷಯವೇ ಎಲ್ಲೆಲ್ಲಿಯೂ ಉದ್ಘೋಷಿತವಾಗುತಲಿದ್ದಿತೆಂದು ಹೇಳಿದರೆ ಸಾಕಾಗಿದೆ. ಪಾಠಕ ಮಹಾಶಯರೆ! ಒಂದಾವರ್ತಿಯಾದರೂ ಇಂತಹ ಸ್ತ್ರೀಸಮಾಜದಲ್ಲಿ ಉಕ್ತ ವಾಗುವ ವರ್ಣನಾತೀತವಾದ ಸಂಗತಿಗಳನ್ನು ಕೇಳಿ ಪುರುಷ ಜನ್ಮವನ್ನು ಸಾರ್ಥಕ ಮಾಡಿಕೊಳ್ಳಬಾರದೆ ?

ರಮೇಶನ ಹೆಂಡತಿಯು, ಮಧ್ಯೇ ಮಧ್ಯೇ ಅಲ್ಲಲ್ಲಿ ಸಂಚಾರಮಾಡುತ್ತಾ ಎಲ್ಲರಿಗೂ ಬೇಕಾದುದನ್ನು ಅನುಗೊಳಿಸುತ್ತ್ತೆ, ಎಲ್ಲರನ್ನೂ ಸಂತೋಷಪಡಿಸುತಲಿದ್ದಳು. ಇವಳು ರಮೇಶನಿಗೆ ಎರಡನೆಯ ಹೆಂಡಿತಿ. ಇವಳ ಹೆಸರು ಸಾವಿತ್ರಿ. ಮೊದಲನೆಯ ಹೆಂಡಿತಿಯು, ಏಕಮಾತ್ರ ಪುತ್ರಿಯನ್ನು ಪ್ರಸವಿಸಿ, ಪರಲೋಕಗಮನ ಮಾಡಿದನಂತರ, ರಮೇಶನು ಅನುಬಂಧಿಗಳ ನಿರ್ಬಂಧದಿಂದ ಮತ್ತೆ ಮದುವೆಯಾದನು. ಈಗ ಆ ಸಾವಿತ್ರಿಯ ಮಗುವಿಗೆ ಅನ್ನಪ್ರಾಶನ. ವಿವಾಹವಾದ ಹತ್ತು ವರುಷದ ಮೇಲೆ ರಮೇಶನಿಗೆ ಪುತ್ರಲಾಭವಾಯಿತಾದುದರಿಂದ ಮಗುವಿನ ಅನ್ನಪ್ರಾಶನವು ಇಷ್ಟು ವಿಜೃಂಭಣೆಯಾಗಿ ನಡೆಯಲು ಕಾರಣವಾಯಿತು. ಆತ್ಮೀಯರು, ಅನಾತ್ಮೀಯರು ಎಲ್ಲರೂ, ಮೂರು ದಿವಸಕ್ಕೆ ಮುಂಚೆಯೇ ಬಂದು ಸೇರಿದರು. ಮುದಿತನದಲ್ಲಿ ರಮೇಶನಿಗೆ ಸಂತಾನಪ್ರಾಪ್ತಿಯಾಗಿರುವುದನ್ನು ನೋಡಿ ಎಲ್ಲರೂ ಆನಂದಸಾಗರದಲ್ಲಿ ಮಜ್ಜನೋನ್ಮಜ್ಜನ ಮಾಡುತಲಿರುವರು. ಆದರೆ, ರಮೇಶ ಅವನ ಸ್ತ್ರೀ ಇಬ್ಬರು ಮಾತ್ರ ಸ್ವಲ್ಪ ಉದ್ವಿಗ್ನರಾಗಿದ್ದರು. ಕಾರಣವೇನೆಂದರೆ—ಕಳೆದ ರಾತ್ರಿಯಿಂದಲೂ ಆಕಾಶವು ನೀರಂಧ್ರವಾಗಿ ಮೇಘಾವೃತವಾಗಿದ್ದಿತು. ಈ ದಿನವೇನಾದರೂ ವಿಪರೀತವಾಗಿ ಮಳೆ ಬರುವ ಸಂಭವದಲ್ಲಿ ಮಾಡಿದ ಕೆಲಸವೆಲ್ಲವೂ ಕೆಟ್ಟು ಹೋದೀತೆಂಬ ಭಯ ಮಾತ್ರ ಇವರ ಹೃದಯದಲ್ಲಿ ಕಿಂಚಿತ್ ಪದಾರ್ಪಣ ಮಾಡಿದ್ದಿತು.

ರಮೇಶನ ಮನೆಯ ಹಿಂದುಗಡೆ ಒಂದು ಸುಂದರವಾದ ಪುಷ್ಕರಣಿ ಇರುವುದೆಂದು ಮೊದಲೇ ತಿಳಿಸಿರುವೆವಷ್ಟೆ. ಆ ಪುಷ್ಕರಣಿಯ ಸೋಪಾನಗಳಮೇಲೆ ಈ ದಿನ ಅನೇಕ ಸ್ತ್ರೀಯರು ತುಂಬಿಕೊಂಡಿರುವರು. ಕೆಲವರು ಕೊಡಗಳಿಂದ ನೀರನ್ನು ತುಂಬಿಕೊಂಡು ಹೋಗುತಲಿದ್ದರು. ಕೆಲವರು ನೀರಿನಲ್ಲಿ ಆಕಂಠಮಗ್ನರಾಗಿ ಪ್ರಫುಲ್ಲವಾದ ಕಮಲಗಳಂತೆ ಶೋಭಿಸುತಲಿದ್ದರು. ಕೆಲವರು ಸೋಪಾನದ ಮೇಲೆ ಕುಳಿತು ತಂಬಿಗೆಗಳಿಂದ ನೀರನ್ನು ಮೈಮೇಲೆ ಸುರಿದುಕೊಂಡು ಸ್ನಾನ ಮಾಡುತಲಿದ್ದರು. ಕೆಲವರು ಒಬ್ಬರಮೇಲೊಬ್ಬರು ನೀರ ಚೆಲ್ಲಾಡುತಿದ್ದರು. ಮತ್ತೆ ಕೆಲವರು ಪ್ರೇಮಾತಿಶಯದಿಂದ ಒಬ್ಬರಿಗೊಬ್ಬರು ಕಮಲವನ್ನು ಕಿತ್ತು ಹೊಡೆದಾಡುತಲಿದ್ದರು. ಪುಷ್ಕರಿಣಿಯ ಜಲವು ಭಿನ್ನಭಿನ್ನವಾಗಿ, ತರಂಗಗಳು ಎದ್ದು ಮಧ್ಯೇ ಮಧ್ಯೇ ಸ್ನಾನಮಾಡುತಲಿದ್ದ ಸುಂದರಿಯರ ಮುಖವನ್ನು ಮೃದುವಾಗಿ ಚುಂಬನಮಾಡುತಲಿದ್ದುವು. ಅನಂತರ ಸ್ವಲ್ಪದೂರ ಹೋಗಿ ಮತ್ತೆ ಬಂದು ಅವರ ಕಿವಿಗಳಲ್ಲಿ ಏನೋ ಅಸ್ಫುಟವಾಗಿ ಮಾತನಾಡುವಂತೆ ಕಾಣಿಸಿಕೊಳ್ಳುತಿದ್ದುವು.

ಹೆಂಗಸರು ವಿಧವಿಧವಾಗಿ ಜಲಕ್ರೀಡೆಯನ್ನು ಮಾಡುತಲಿದ್ದರು. ಹನ್ನೆರಡು ವರುಷವಯಸ್ಸುಳ್ಳ ಒಬ್ಬ ಹುಡುಗಿಯು ಮಾತ್ರ ಕೆಳಗಣ ಸೋಪಾನದಲ್ಲಿ ಕುಳಿತು ಇವರ ಜಲವಿಹಾರವನ್ನು ನೋಡುತಲಿದ್ದಳು.

ಹುಡುಗಿಯು, ಒಬ್ಬ ಯುವತಿಯನ್ನು ಲಕ್ಷ್ಯಮಾಡಿ "ಅಮ್ಮ! ನೀರಿನಲ್ಲಿ ಮುಳುಗಿ ನನಗೊಂದು ಹೂವನ್ನು ತಂದು ಕೊಡಬಾರದೆ?" ಎಂದಳು.

ಯುವತಿಯು ಬಹಳ ರಸಿಕಳು. ಹುಡುಗಿಯ ಮಾತನ್ನು ಕೇಳಿ, "ತಂಗೆ! ಒಳ್ಳೆಯಮಾತನ್ನು ಹೇಳಿದೆ! ನೀರಿನಲ್ಲಿ ಮುಳುಗುವುದನ್ನು ನನಗೆ ಯಾರೂ ಕಲಿಸಿಕೊಟ್ಟಿಲ್ಲ. ಒಂದುವೇಳೆ ಕಾಲುಜಾರಿ ನೀರಿನಲ್ಲಿ ಮುಳುಗಿಕೊಂಡರೆ ಏನು ಗತಿ?" ಎಂದು ಉತ್ತರ ಕೊಟ್ಟಳು.

ಈ ಸಲ್ಲಾಪವನ್ನು ಕೇಳಿ ಎಲ್ಲರೂ ನಗಲಾರಂಭಿಸಿದರು. ಹುಡುಗಿಯೂ ನಕ್ಕಳು. ಹುಡುಗಿಯು ತಾನು ಏತಕ್ಕೆ ನಕ್ಕಳೆಂಬುದನ್ನು ಮಾತ್ರ ಅರಿತವಳಾಗಿರಲಿಲ್ಲ.

ಹುಡುಗಿಯ ಹೆಸರು ಶೋಭನೆ. ಶೋಭನೆಯು ರಮೇಶಬಾಬುವಿನ ಮೊದಲನೆಯ ಹೆಂಡಿತಿಯ ಕನ್ಯೆ. ಇಂದಿನವರೆಗೂ ಅವಳಿಗೆ ವಿವಾಹವಾಗಿರಲಿಲ್ಲ.

ಶೋಭನೆಯೂ ಇತರ ಹೆಂಗುಸರ ಜತೆಯಲ್ಲಿ ನಕ್ಕಳು. ಈ ನಗೆಯ ಮರ್ಮವನ್ನು ಅವಳು ಅರಿತವಳಾಗಿದ್ದಳೋ ಇಲ್ಲವೋ ನಾವು ಖಂಡಿತವಾಗಿಯೂ ತಿಳಿದು ಹೇಳುವುದಕ್ಕಾಗುವುದಿಲ್ಲ. ಇತರರು ಅಳುತ್ತಿದ್ದರೆ, ಅವಳೂ ಅವರ ಜತೆಯಲ್ಲಿ ಅಳುವಳು. ಏಕೆಂದರೆ—ಅಳುವಿನಲ್ಲಿ ಒಂದು ವಿಧವಾದ ಮರ್ಮಸ್ಪರ್ಶಿನಿಯಾದ ಶಕ್ತಿಯುಂಟು, ಆ ಶಕ್ತಿಯು ನಗೆಯಲ್ಲಿ ಇರುವುದೋ ಇಲ್ಲವೋ ಗೊತ್ತಿಲ್ಲ. ಒಂದುವೇಳೆ ಇದ್ದಲ್ಲಿ, ಶೋಭನೆಯು ಆಶಕ್ತಿಯ ಪ್ರಭಾವದಿಂದಲೇ ನಕ್ಕಿರಬೇಕು. ಹೇಗೋ ಎಲ್ಲರ ಜತೆಯಲ್ಲಿಯೂ ಶೋಭನೆಯು, ತಿಳಿದೋ, ತಿಳಿಯದೆಯೋ, ನಕ್ಕುಬಿಟ್ಟಳು. ಇದನ್ನು ನೋಡಿ ಎಲ್ಲರೂ ಮಾತನಾಡಿಕೊಳ್ಳುವುದಕ್ಕೆ ಆರಂಭಮಾಡಿದರು. ಕೆಲವು ರಹಸ್ಯವಾದ ಮಾತುಗಳೂ ಜರುಗಿದವು. ಇದಾವುದೂ ಶೋಭನೆಗೆ ಗೊತ್ತಾಗಲಿಲ್ಲ.

ಯುವತಿಯರ ಸರಸಾಲಾಪಗಳು ಹಠಾತ್ತಾಗಿ ಭಗ್ನವಾಯಿತು. ಎಲ್ಲರಲ್ಲಿಯೂ ಗಡಿಬಿಡಿ ಎದ್ದಿತು. ಸುಂದರಿಯರ ಅವ್ಯಾಜಮಧುರವಾದ ನಗೆಯು ಅಧರ ಪ್ರಾಂತದಲ್ಲಿಯೇ ಅಡಗಿಹೋಯಿತು. ಆಕಾಶಪ್ರಾಂತದಲ್ಲಿ ಇದ್ದಕ್ಕಿದ್ದಹಾಗೆಯೇ ಮೋಡವು ಕವಿದುಕೊಂಡು, ಮಳೆಯು ಧಾರಾಕಾರವಾಗಿ ಸುರಿಯುವಹಾಗೆ ಕಂಡು

ಬಂದಿತು. ಮೋಡದಿಂದ ಸೂರ್ಯನ ರಶ್ಮಿಯು ಮುಚ್ಚಿಹೋಗಿ ಎಲ್ಲವೂ ಅಂಧಕಾರ ಮಯವಾಗಿ ಹೋಯಿತು. ಆ ಸಮಯದಲ್ಲಿ ಒಬ್ಬ ಯುವಕನು ಪುಷ್ಕರಿಣಿಗೆ ಅಭಿಮುಖವಾಗಿ ಬರುತಿದ್ದುದನ್ನು ಅಲ್ಲಿನ ಸ್ತ್ರೀಯರೆಲ್ಲರೂ ನೋಡಿದರು. ಆಗ ಯುವತಿಯರೆಲ್ಲರೂ ನಾಚಿಕೊಂಡು, ಅವನು ಸಮೀಪಕ್ಕೆ ಬರುವುದರೊಳಗಾಗಿಯೇ, ಮೆಟ್ಟಲುಗಳನ್ನು ಹತ್ತಿ ರಮೇಶನ ಗೃಹಾಭಿಮುಖವಾಗಿ ಪಲಾಯನವಾದರು. ಶೋಭನೆ ಮತ್ತು ಒಬ್ಬಿಬ್ಬರು ಹೆಂಗುಸರು ಮಾತ್ರ ಅಲ್ಲಿಯೇ ಇದ್ದರು. ಶೋಭನೆಯು ಸೀರೆಯನ್ನು ಸರಿಮಾಡಿಕೊಂಡಳು.

ಯುವಕನು ಮೆಲ್ಲಮೆಲ್ಲನೆ ಮೆಟ್ಟಲು ಇಳಿದು ನೀರಿನಲ್ಲಿ ಸ್ನಾನಮಾಡಲಾರಂಭಿಸಿದನು. ಅವನು ನೀರಿನಲ್ಲಿಳಿದೊಡನೆಯೇ ಒಬ್ಬ ಹೆಂಗುಸು ಶೋಭನೆಯ ಕಿವಿಯಲ್ಲಿ—ಒಂದು ಹುವ್ವನ್ನು ಕಿತ್ತುಕೊಡುವಹಾಗೆ ಕೇಳಲಾರೆಯಾ ? ಎಂದಳು.

ಶೋಭನೆ—ನರೇಂದ್ರನನ್ನು ನೀನೇತಕ್ಕೆ ಕೇಳಬಾರದು ?

ಯುವಕನ ಹೆಸರು ನರೇಂದ್ರನಾಥ. ನರೇಂದ್ರನಾಥನು ಸಾವಿತ್ರಿಯ ಬಾಲ್ಯಸ್ನೇಹಿತಳ ಮಗ. ನರೇಂದ್ರನಾಥನು ಆಗಾಗ್ಗೆ ಶೋಭನೆಯ ಮನೆಗೆ ಬಂದು, ಎರಡು ಮೂರು ದಿನಗಳು ಇದ್ದು ಹೋಗುತಲಿದ್ದನು. ಇವನನ್ನು ಶೋಭನೆಯು ಅಣ್ಣನೆಂದು ಕರೆಯುತಲಿದ್ದಳು. ಸಾವಿತ್ರಿಯು, ನರೇಂದ್ರನನ್ನು ಹೇಗೆ ಪ್ರೀತಿಸುತಲಿದ್ದಳೋ, ರಮೇಶನೂ ಹಾಗೆಯೇ ಪ್ರೀತಿಸುತಲಿದ್ದನು. ಶೋಭನೆಯ ಮಾತನ್ನು ಕೇಳಿ, ನರೇಂದ್ರನು "ಏನು ಶೋಭನೆ ?" ಎಂದನು.

ಶೋಭನೆ—ಅಣ್ಣ ! ಒಂದು ಹೂ ಕೊಯಿದುಕೊಡಬಾರದೆ ?

ಶೋಭನೆಯ ಮೃದುಮಧುರವಾದ ಮಾತನ್ನು ಕೇಳಿದೊಡನೆಯೇ ನರೇಂದ್ರನ ಹೃದಯದಲ್ಲಿ ಒಂದು ಅನಿರ್ವಚನೀಯವಾದ ಭಾವವು ಅಂಕುರಿಸಿತು. ಶರೀರವೆಲ್ಲವೂ ಒಂದುವಿಧವಾಗಿ ಸಾತ್ವಿಕಭಾವದಿಂದ ಕಂಪಿತವಾಗಲಾರಂಭವಾಯಿತು.

ನರೇಂದ್ರನು, ಈ ಹೂವಿನಿಂದ ಶೋಭನೆಗೆ ಏನುತಾನೇ ಪ್ರಯೋಜನವಿದ್ದೀತು. ಆದರೂ ಅವಳು ಅಪೇಕ್ಷೆಪಟ್ಟು ಕೇಳಿದುದರಿಂದ ತಂದು ಕೊಡುವುದೇ ಸರಿಯೆಂದು ನಿಶ್ಚಯಿಸಿ, ನೀರಿನಲ್ಲಿ ಮುಳುಗಿ ಕೆಲವು ಹೂಗಳನ್ನು ಕೊಯಿದು ಅವಳ ಕೈಯಲ್ಲಿ ಕೊಡುವಾಗ ಅವಳ ಬೆರಲಿನಲ್ಲಿದ್ದ ಉಂಗುರವು ಸೋಪಾನದಲ್ಲಿ ಜಾರಿಬಿದ್ದಿತು. ನರೇಂದ್ರನು ಒಂದು ಹೂವನ್ನು ಅವಳ ಕೈಗೆ ಕೊಟ್ಟು, ಮತ್ತೇನು ಬೇಕಾದರೂ ತೆಗೆದು ಕೊಡುತ್ತೇನೆಂದನು. ಇದನ್ನು ಕೇಳಿ ಶೋಭನೆಯು ಮುಗುಳನಗೆ ನಕ್ಕು ಮನೆಗೆ ಹೊರಡಲು ಸಿದ್ಧಳಾದಳು ಇದನ್ನು ನೋಡಿ

ನರೇಂದ್ರನು "ನಿನ್ನ ಉಂಗುರವು ಬಿದ್ದುಹೋಗಿದೆ. ಸ್ವಲ್ಪ ತಾಳು. ನಾನು ಅದನ್ನು ಹುಡುಕಿ ತೆಗೆದುಕೊಡುವೆನು" ಎಂದನು.

ನರೇಂದ್ರನು ತನ್ನ ಕೈಯಿಂದ ಶೋಭನೆಯ ಕೈಯನ್ನು ಹಿಡಿದುಕೊಂಡು ಉಂಗುರವನ್ನು ಹುಡುಕುವುದಕ್ಕೆ ಹೋದನು. ಇಬ್ಬರೂ ಪರಸ್ಪರ ಕರಸ್ಪರ್ಶ ದಿಂದ ಚಕಿತರಾಗಿ ಸ್ವರ್ಗಸುಖವನ್ನು ಅನುಭವಮಾಡಿದರು. ಉಂಗುರವನ್ನು ಹುಡುಕುವ ಸಂದರ್ಭದಲ್ಲಿ ಒಬ್ಬರಿಗೊಬ್ಬರು ನೋಡಲಾರಂಭಿಸಿದರು, ಆದರೆ ಅವರ ಪರಸ್ಪರದರ್ಶನವು ಉದ್ದೇಶಹೀನವಾಗಿದ್ದಿತು. ಉಂಗುರವು ನರೆಂದ್ರನ ಕೈಗೆ ಸಿಕ್ಕಿ ಹೇಗೆಯೋ ಕೈಜಾರಿ ಮತ್ತೆ ನೀರಿನೊಳಗೆ ಬಿದ್ದುಹೋಯಿತು. ನರೇಂದ್ರನು ಶೋಭನೆಯ ಕೈಯನ್ನು ಬಿಟ್ಟು ಮತ್ತೆ ಉಂಗುರವನ್ನು ತರುವುದಕ್ಕೆ ಹೋದನು. ಅದನ್ನು ಹುಡುಕಿಕೊಂಡು ಬಂದು ಮತ್ತೆ ಶೋಭನೆಯ ಕೈಯನ್ನು ಹಿಡಿದು ಕೊಂಡನು. ಒಂದಾವರ್ತಿ ಇಬ್ಬರ ದೃಷ್ಟಿಯೂ ಕ್ಷಣಕಾಲ ಸೇರಿತು.

ಆ ಸಮಯದಲ್ಲಿ ಅಲ್ಲಿ ಮತ್ತಾರೂ ಇರಲಿಲ್ಲ. ಆರಾರು ಹೂವಿಗೋಸ್ಕರ ಅಲ್ಲಿಯೇ ಇದ್ದರೋ, ಅವರೆಲ್ಲರೂ ಹೂ ಸಿಕ್ಕಿದೊಡನೆಯೇ ಹೊರಟುಹೋದರು. ಶೋಭನೆ ಮತ್ತು ನರೇಂದ್ರ—ಇಬ್ಬರು ಮಾತ್ರ ನಿಂತರು.

ನರೇಂದ್ರನಾಥ! ನೀನು ಯುವಕನು, ಅವಿವಾಹಿತನು, ಅಲ್ಲದೆ ನಿನಗೆ ಓದುಬರೆಹ ಬರುತ್ತದೆ. ನೀನು ಹನ್ನೆರಡುವರ್ಷ ತುಂಬಿದ ಒಬ್ಬ ಹುಡುಗಿಯ ಕೈಯನ್ನು ಹಿಡಿದು, ಆದರದೊಡನೆ ಅವಳ ಮುಖವನ್ನು ನೋಡುತ್ತಾ, ಏನು ಮಾಡುತಲಿರುವೆ? ಶೋಭನೆ, ನಿನಗೇನು ಹೇಳಲಿ! ನೀನು ಹುಡುಗಿ, ಅದರಲ್ಲಿಯೂ ಯೌವನೋನ್ಮುಖಿ. ಇದೇನು ಕೆಲಸ ಮಾಡುವೆ? ಈರೀತಿಯಾದ ಕೆಲಸವು ನಿನಗೆ ತಕ್ಕುದಲ್ಲ!

ಕಲ್ಲಿನಿಂದ ಮಾಡಿದ ಬೊಂಬೆಯಂತೆ ಇಬ್ಬರೂ ನಿರ್ವಾಕ್—ನಿಷ್ಪಂದ. ಹಠಾತ್ತಾಗಿ ಇಬ್ಬರಿಗೂ ಸಂಜ್ಞಾಲಾಭವಾಯಿತು. ಅಂತರಿಕ್ಷದಲ್ಲಿ ಮೇಘವು ವಿಪರೀತವಾಗಿ ಗುಡುಗಲಾರಂಭಿಸಿತು. ಗಾಳಿಯು ಘೋರೆಂದು ಘೋರ್ಗರೆಯಿತು. ಗಿಡ ಮರಗಳು ವಾಯುವಿನ ವೇಗದಿಂದ ಆಂದೋಳನಮಾಡಿದವು. ನಂದನ ಪುರ ವೆಲ್ಲವೂ ಧೂಳಿಯಿಂದ ತುಂಬಿಹೋಯಿತು.

ನರೇಂದ್ರ—ಶೋಭನೆ! ಬೇಗನೆ ಮನೆಗೆ ಹೋಗು.

ಶೋಭನೆ—ನಾನು ಹೋಗುತ್ತೇನೆ—ನೀನೊ?

ನರೇಂದ್ರ—ನಾನೂ ಹೋಗುತ್ತೇನೆ.

ಶೋಭನೆಗೆ ನರೇಂದ್ರನೊಡನೆ ಮನೆಗೆ ಹೋಗಬೇಕೆಂದು ಆಶೆ. ಅವನನ್ನು ಬಿಟ್ಟು ಹೋಗಲು ಅವಳಿಗೆ ಮನಸ್ಸು ಬಾರದು. ಇವಳ ಅಭಿಪ್ರಾಯವನ್ನು ತಿಳಿದು, ನರೇಂದ್ರನು, "ಶೋಭನೆ! ನನ್ನ ಬಟ್ಟೆಯು ಒದ್ದೆಯಾಗಿರುವುದು. ಮಳೆಬರುವುದೆಂದು ನನಗೆ ಭಯವಿಲ್ಲ. ನೀನೇತಕ್ಕೆ ಮಳೆಯಲ್ಲಿ ನನೆಯಬೇಕು?" ಎಂದನು.

ಶೋಭನೆ—ಮಳೆಬೀಳಲು ಪ್ರಾರಂಭವಾಯಿತು. ನನಗೆ ಓಡಿಹೋಗಲು ಆಗುವುದಿಲ್ಲ. ಒಂದುವೇಳೆ ಉಂಗುರವು ಮತ್ತೆ ಬಿದ್ದುಹೋಗುವುದಾದರೆ—

ನರೇಂದ್ರನು, ಮನಸ್ಸಿನಲ್ಲಿಯೇ, ಒಂದುವೇಳೆ ಅದು ಬಿದ್ದುಹೋದರೆ, ಮತ್ತೆ ತಂದುಕೊಡುವೆನು. ಮತ್ತೊಂದಾವರ್ತಿ ನಿನ್ನ ಅನುಪಮಾನವಾದ ಮುಖಕಾಂತಿಯನ್ನು ಮನದಣಿಯೆ ನೋಡಿ ಕೃತಾರ್ಥನಾಗುವೆನು, ಎಂದುಕೊಂಡು (ಪ್ರಕಾಶವಾಗಿ) ಹಾಗಾದರೆ ನಡೆ, ನಾನೂ ನಿನ್ನ ಜತೆಯಲ್ಲಿಯೇ ಹೊರಟು ಬರುವೆನು.

ಹೀಗೆ ಹೇಳಿ ಇಬ್ಬರೂ ಸೋಪಾನವನ್ನು ಅತಿಕ್ರಮಿಸಿ ಮನೆಯ ಕಡೆಗೆ ಹೊರಟುಹೋದರು.

---

## ದ್ವಿತೀಯ ಪರಿಚ್ಛೇದ

ಮೇಘವು ಆವರಿಸಿಕೊಂಡಿತು. ಒಂದೆರಡು ಮಳೆಯ ಹನಿಯೂ ಬಿದ್ದಿತು. ರಮೇಶಬಾಬುವೂ ಏನಾಗುವುದೋ ಎಂದು ಬಹಳ ಭಯಪಟ್ಟನು. ಅಷ್ಟರಲ್ಲಿಯೇ ಒಂದು ಬಿರುಗಾಳಿ ಯೇಳಲು, ಕವಿದುಕೊಂಡಿದ್ದ ಮೇಘವೆಲ್ಲವೂ ಭಿನ್ನಭಿನ್ನವಾಗಿ ಹೋಯಿತು. ಆಕಾಶದಲ್ಲಿ ಅಲ್ಲಲ್ಲಿದ್ದ ಒಂದೆರಡು ಮೇಘಖಂಡಗಳೂ ಒಂದೆರಡು ಮಳೆಯ ಹನಿಗಳನ್ನು ಸುರಿಸಿ ಮೆಲ್ಲಗೆ ತೇಲಿಹೋದವು. ಆಕಾಶವು ಮತ್ತೆ ನಿರ್ಮಲವಾಯಿತು. ಸೂರ್ಯನು ತನ್ನ ಸಹಸ್ರ ಕಿರಣಗಳಿಂದ ಕಾಣಿಸಕೊಳ್ಳಲಾರಂಭಿಸಿದನು. ಉಜ್ಜ್ವಲವಾದ ಸೂರ್ಯಕಿರಣಗಳಿಂದ ನಂದನಪುರವು ಮತ್ತೆ ಉದ್ಭಾಸಿತವಾಯಿತು.

ಮಧ್ಯಾಹ್ನ ಹನ್ನೊಂದು ಗಂಟೆಯಾಯಿತು. ರಮೇಶನು ಬ್ರಾಹ್ಮಣ ಭೋಜನಕ್ಕೆ ತಕ್ಕ ಏರ್ಪಾಡು ಮಾಡಲಾರಂಭಿಸಿದನು. ಭೋಜನಕ್ಕೆ ಬಂದವರೆಲ್ಲರೂ ಏಕತ್ರ ಕುಳಿತರು. ಮನೆಯ ಜನರೆಲ್ಲರೂ ಸಡಗರದಿಂದ ಬಡಿಸಲು ಸನ್ನದ್ಧ

ರಾದರು. ನರೇಂದ್ರನಾಥನು ಅಷ್ಟರೊಳಗೆ ತನ್ನ ಒದ್ದೆಯಾಗಿದ್ದ ವಸ್ತ್ರವನ್ನು ಬಿಸಿಲಲ್ಲಿ ಒಣಗಿಸಿ, ಉಟ್ಟುಕೊಂಡು ಮನೆಯೊಳಗೆ ಪ್ರವೇಶಮಾಡಿದನು. ಸಾವಿತ್ರಿಯು ಅವನನ್ನು ನೋಡಿದಳು.

ಸಾವಿತ್ರಿ—ನೀನು ಊಟಕ್ಕೆ ಕುಳಿತುಕೊಳ್ಳುವುದಿಲ್ಲವೇತಕ್ಕೆ? ನೀವೆಲ್ಲರೂ ಸಾವಕಾಶಮಾಡಿದರೆ ಬಂದ ಬ್ರಾಹ್ಮಣರ ಜತೆಯಲ್ಲಿ ಕುಳಿತು ಊಟ ಮಾಡುವರಾರು?

ನರೇಂದ್ರನು ಸ್ವಲ್ಪ ನಕ್ಕು "ನಾನೂ ಕುಳಿತುಕೊಳ್ಳುತ್ತೇನೆ." ಎಂದನು.

ಸಾವಿತ್ರಿಯು, ಶೋಭನೆಯನ್ನು ಕರೆದು, "ಶೋಭನೆ! ನರೇಂದ್ರನನ್ನು ಕರೆದುಕೊಂಡುಹೋಗಿ ಊಟಕ್ಕೆ ಕೂಡಿಸು. ನಿಮ್ಮತ್ತೆಯು ಬಡ್ಡಿಸುವಳು." ಎಂದು ಹೇಳಿ ನರೇಂದ್ರನನ್ನು ನೋಡಿ "ಅದೇಕೆ ನಿಮ್ಮತಾಯಿಯು ಈಹೊತ್ತು ನಮ್ಮಮನೆಗೆ ಬರಲಿಲ್ಲ? ಒಳ್ಳೆಯದು, ಅವಳು ನಮ್ಮ ಮನೆಗೆ ಬರಬಾರದೇನೋ!" ಎಂದಳು.

ಸಾವಿತ್ರಿಯ ಮಾತನ್ನು ಕೇಳಿ, ನರೇಂದ್ರನು "ಹಾಗಾದರೆ ಯಾವಾಗಲೂ ನಮ್ಮ ತಾಯಿಯು ನಿಮ್ಮ ಮನೆಗೆ ಬರಲೇಯಿಲ್ಲವೆ? ಈಗ ನೀನು ಕೊಪಮಾಡಲು ಕಾರಣವೇನು? ಅವಳಿಗೆ ದೇಹದಲ್ಲಿ ಸ್ವಲ್ಪ ಆಲಸ್ಯ, ಅದು ಕಾರಣ ಅವಳು ಬರಲಿಲ್ಲ" ಎಂದು ಹೇಳಿದನು.

ಸಾವಿತ್ರಿಯು ಕೃತ್ರಿಮವಾದ ಕೋಪವನ್ನು ಪ್ರಕಾಶಮಾಡಿ "ಇರಲಿ, ನಿನ್ನ ಮದುವೆಯಲ್ಲಿ ನಾನೂ ನಿಮ್ಮ ಮನೆಗೆ ಬರುವುದಿಲ್ಲ" ಎಂದಳು.

ನರೇಂದ್ರನಾಥನ ಮನೆಯ ಹತ್ತಿರವೇ ಸಾವಿತ್ರಿಯ ತೌರುಮನೆ. ಸಾವಿತ್ರಿಯೂ ನರೇಂದ್ರನ ತಾಯಿಯೂ ಸ್ವಲ್ಪ ದೂರಸಂಬಂಧಿಗಳಾಗಿದ್ದರೂ ಪರಸ್ಪರ ಇಬ್ಬರೂ ಪರಮಾಪ್ತರಾದ ಗೆಳತಿಯರಾಗಿದ್ದರು. ಬಾಲ್ಯದಿಂದ ಇವರಿಬ್ಬರ ಸ್ನೇಹವೂ ಏಕರೀತಿಯಾಗಿದ್ದಿತು. ಅದುಕಾರಣ ಸಾವಿತ್ರಿಯು ನರೇಂದ್ರನನ್ನು ತನ್ನ ಮಗನಂತೆಯೇ ಪ್ರೀತಿಸುತಲಿದ್ದಳು. ಆದುದರಿಂದಲೇ ನರೇಂದ್ರನು ಪದೇ ಪದೇ ಸಾವಿತ್ರಿಯ ಮನೆಗೆ ಬಂದು ಹೋಗುತ್ತಿದ್ದನು. ಈ ಸಂಬಂಧದಿಂದಲೇ ಶೋಭನೆಯು ನರೇಂದ್ರನನ್ನು ಅಣ್ಣನೆಂದು ಕರೆಯುತಲಿದ್ದಳು. ನರೇಂದ್ರನಾಥನ ತಂದೆಯು ರಮೇಶಬಾಬುವಿನಷ್ಟು ಸಂಪನ್ನನಾಗಿರಲಿಲ್ಲ. ರಮೇಶನು ನರೇಂದ್ರನನ್ನು ಪುತ್ರನಂತೆ ಪ್ರೀತಿಸುತ್ತ ಅವನ ವಿದ್ಯಾವ್ಯಾಸಂಗಕ್ಕೋಸ್ಕರ ಆಗಾಗ ಏನಾದರೂ ದ್ರವ್ಯಸಾಹಾಯ್ಯಮಾಡುತಲಿದ್ದನು. ನರೇಂದ್ರನ ತಂದೆಯ

ಹೆಸರು ನಗೇಂದ್ರನಾಥ. ನಗೇಂದ್ರನಾಥನು ಯಾವುದೋ ಒಂದು ಕೆಲಸದಲ್ಲಿ ಸ್ವಲ್ಪ ವೇತನಕ್ಕೆ ಸೇರಿಕೊಂಡಿದ್ದನು. ಸಂಪಾದನೆಯು ಕಡಮೆಯಾಗಿದ್ದರೂ ಬಹಳ ಸಾಹಸಪಟ್ಟು ಪುತ್ರನನ್ನು ವಿದ್ಯಾವಂತನನ್ನಾಗಿ ಮಾಡಿದ್ದನು.

ನರೇಂದ್ರನು ಭೋಜನಮಾಡುತಲಿದ್ದನು. ಶೋಭನೆಯ ಅತ್ತೆಯೊಬ್ಬಳು ಪದಾರ್ಥವನ್ನು ಬಡ್ಡಿಸುತಲಿದ್ದಳು. ಶೋಭನೆಯು ಸ್ವಲ್ಪದೂರ ನಿಂತು ನರೇಂದ್ರನನ್ನು ಓರೆಗಣ್ಣಿನಿಂದ ನೋಡುತಲಿದ್ದಳು. ನರೇಂದ್ರನು ಸರಿಯಾಗಿ ಊಟ ಮಾಡುತ್ತಿರಲಿಲ್ಲ. ಅವನು ಶೋಭನೆಯ ಅಮಾನುಷವಾದ ಸೌಂದರ್ಯವನ್ನು ನೋಡಿನೋಡಿ ಮನದಲ್ಲಿ ಏನೇನೋ ಆಲೋಚಿಸುತಲಿದ್ದನು.

ಸಾವಿತ್ರಿಯು ಒಂದಾವರ್ತಿ ಅಲ್ಲಿಗೆ ಬಂದು—ನರೇಂದ್ರ! ಇದೇನು ಹೀಗೆ ಊಟಮಾಡುವೆ! ನಾಚುಗೆಪಡಬೇಡ. ಬೇಕಾದುದನ್ನು ಕೇಳಿ ಬಡ್ಡಿಸಿಕೊಂಡು ಊಟಮಾಡು" ಎಂದಳು.

ಹೀಗೆ ಹೇಳಿ ಸಾವಿತ್ರಿಯು ಬೇರೆ ಕಡೆಗೆ ಹೊರಟುಹೋದಳು.

ನರೇಂದ್ರನು, ಊಟಮಾಡಿ ಎದ್ದು ಕೈತೊಳೆದುಕೊಂಡನು. ಶೋಭನೆಯು ಅವನಿಗೆ ತಾಂಬೂಲವನ್ನು ತಂದುಕೊಟ್ಟಳು. ಪರಸ್ಪರ ಹಸ್ತಸ್ಪರ್ಶವಾಯಿತು. ನರೇಂದ್ರನ ಹೃದಯದಲ್ಲಿ ಪ್ರೇಮ ತಂತ್ರಿಯು ಕಂಪಿತವಾಯಿತು. ತಲೆಯು ತಿರಿಗಿತು. ಅವನು ಹಾಗೆಯೇ ಅವಾಕ್ಕಾಗಿ ನಿಂತುಕೊಂಡನು. ಇದನ್ನು ಯಾರೂ ನೋಡಲಿಲ್ಲ. ಮನೆಯ ಯಜಮಾನಿ ಸಾವಿತ್ರಿಯು ಮಾತ್ರ ದೂರದಲ್ಲಿ ನಿಂತಿದ್ದಳು. ಅವಳು "ಇದೇನು ನರೇಂದ್ರ!" ಎಂದಳು. ನರೇಂದ್ರನು ಚೇತರಿಸಿಕೊಂಡು ತಾಂಬೂಲವನ್ನು ಸ್ವೀಕರಿಸಿ ಮನೆಯನ್ನು ಬಿಟ್ಟು ಹೊರಗೆ ಬಂದನು.

---

## ಮೂರನೆಯ ಪರಿಚ್ಛೇದ

ನರೇಂದ್ರನಾಥನು ಊಟಮಾಡಿ ಎದ್ದಾಗ, ಇನ್ನೂ ಬ್ರಾಹ್ಮಣರ ಭೋಜನವಾಗಿರಲಿಲ್ಲ. ಮಾಡಿದ್ದ ಪದಾರ್ಥಗಳೆಲ್ಲವೂ ಒಂದೊಂದಾಗಿ ಬಡ್ಡಿಸಿದುದಾಯಿತು. ಬ್ರಾಹ್ಮಣರೆಲ್ಲರೂ ತೃಪ್ತಿಕರವಾಗಿ ಭೋಜನಮಾಡಿದರು. ಎಲ್ಲರಿಗೂ ತಾಂಬೂಲವು ಕೊಟ್ಟಾದಮೇಲೆ, ಕೆಲವರು ತಾಂಬೂಲವನ್ನು ಅಗೆಯುತ್ತಾ ತಂತಮ್ಮ ಮನೆಗಳಿಗೆ ತೆರಳಿದರು. ಕೆಲವರು ಭೋಜನದಿಂದ ಉಂಟಾದ ಶ್ರಮವನ್ನು ಹೋಗಲಾಡಿಸಲೋಸುಗ, ತಂಬಾಕನ್ನು ಸೇವಿಸುತ್ತಾ ಅಲ್ಲಿಯೇ ಕುಳಿತುಕೊಂಡು ಮಾತನಾಡುತಿದ್ದರು. ಮತ್ತೆ ಕೆಲವರು ರಮೇಶನ ಮಗುವನ್ನು ನೋಡಲು

ಅಪೇಕ್ಷಿಸಿದರು. ಮಗುವನ್ನು ಕರೆದು ತಂದುದಾಯಿತು. ಕರಿಯ ಸೀರೆಯನ್ನು ಟ್ಟಿದ ಹನ್ನೆರಡುವರ್ಷ ವಯಸ್ಸುಳ್ಳ ಒಬ್ಬ ಕುಮಾರಿಯು ತೊಡೆಯಮೇಲೆ ಮಗುವನ್ನು ಮಲಗಿಸಿಕೊಂಡು ಎಲ್ಲರಿಗೂ ತೋರಿಸಿದಳು. ನವಕುಮಾರನಿಗೆ ಎಲ್ಲರೂ ಹರಸಿ ಯಥಾಯಥಾ ಕೆಲವರು ಹೊರಟರು. ಉಳಿದಿದ್ದ ಕೆಲವರ ದೃಷ್ಟಿಯು ಕ್ರಮವಾಗಿ ಹುಡುಗಿಯ ಮೇಲೆ ಬಿದ್ದಿತು. ಕುಮಾರಿಯು ತಪ್ತ ಕಾಂಚನಸನ್ನಿಭವಾದ ದೇಹಕಾಂತಿಯುಳ್ಳವಳು. ನೀಲವಸನವನ್ನುಟ್ಟು ಕುಳಿತಿದ್ದಳು. ಈಕೆಯನ್ನು ನೋಡಿದವರು ಮನದಲ್ಲಿ, ನೀಲವಾದ ಜಲರಾಶಿಯ ಮಧ್ಯದಲ್ಲಿ, ವಿಕಸಿತವಾದ ಕಮಲವೋ, ಅಥವಾ, ನೀಲಾಕಾಶದಲ್ಲಿ ಪ್ರಕಾಶಮಾನವಾದ ನಕ್ಷತ್ರಗಳ ಶೋಭಾರಾಶಿಯೋ ಎಂದು ಆಲೋಚಿಸಲಾರಂಭಿಸಿದರು. ಆ ಕುವರಿಯ ಸೌಂದರ್ಯವನ್ನು ನೋಡಿದವರೆಲ್ಲರೂ ಕೇವಲ ಮುಗ್ಧರಾಗಿ ಹೋದರು. ಅವರಲ್ಲಿ ಒಬ್ಬನು " ಈಕೆಯಾರೆಂದು ಕೇಳಿದನು."

ರಮೇಶ—ನನ್ನ ಮಗಳು.

ಪ್ರಶ್ನಕರ್ತನು (ಮನಸ್ಸಿನಲ್ಲಿ) ಈಕೆಯು ರಮೇಶನ ಮೊದಲನೆಯ ಹೆಂಡತಿಯ ಮಗಳಾಗಿರಬಹುದು. (ಪ್ರಕಾಶವಾಗಿ) ಮದುವೆಗೆ ತಕ್ಕುದಾದ ವಯಸ್ಸು ಸನ್ನಿಹಿತವಾಗಿದೆಯಲ್ಲವೆ ?

ರಮೇಶ—ಅಹುದು.

ಪ್ರಶ್ನಕರ್ತ—ಇನ್ನೂ ಏತಕ್ಕೆ ಮದುವೆಯಿಲ್ಲ ?

ರಮೇಶ—ಸರಿಯಾದ ವರನು ದೊರೆಯಲಿಲ್ಲವಾದುದರಿಂದ ಪಾತ್ರವರಿತು ಕನ್ಯಾದಾನ ಮಾಡಬೇಕೆಂದು ನನ್ನ ಇಷ್ಟ. ನೀವಾದರೂ ಸರಿಯಾದ ವರನನ್ನು ಹುಡುಕಿ ಹೇಳಬಾರದೇ? ಇದರಿಂದ ನನ್ನ ಕನ್ಯಾಪಿತೃತ್ವವು ಸಾರ್ಥಕವಾದೀತು.

ಯಾರ ವಿಷಯವಾಗಿ ಇಷ್ಟು ಚರ್ಚೆನಡೆಯುತಲಿತ್ತೊ, ಆಕೆಯು ಮತ್ತೆ ಬೇರೆ ಅಲ್ಲ-ನಮಗೆ ಪೂರ್ವಪರಿಚಿತೆಯಾದ ಶೋಭನೆ. ಶೋಭನೆಯು ವಿವಾಹದ ಮಾತನ್ನು ಕೇಳಿ ನಾಚಿಕೊಂಡಳು. ಆ ಸ್ಥಳವನ್ನು ಬಿಟ್ಟು ಎದ್ದುಹೋಗುವುದಕ್ಕೆ ಪ್ರಯತ್ನಪಟ್ಟಳು. ಸುತ್ತಲೂ ನೋಡಿದಳು, ಹಠಾತ್ತಾಗಿ ನರೇಂದ್ರನಾಥನೂ ಅಲ್ಲಿ ಕುಳಿತಿದ್ದನು. ಒಂದಾವರ್ತಿ ನಾಲ್ಕುಕಣ್ಣುಗಳೂ ಸೇರಿದವು. ಆ ಕ್ಷಣದಲ್ಲಿ ಒಂದು ಮಿಂಚುಹೊಳೆದು, ಎಲ್ಲಿಯೋ ಅಂಧಕಾರದಲ್ಲಿ ಲೀನವಾಗಿ ಹೋಯಿತು. ಶೋಭನೆಯು ಮತ್ತೆ ನೋಡಿದಳು. ಕೇವಲ ನರೇಂದ್ರನಾಥ ; ನರೇಂದ್ರನನ್ನು

ನೋಡಿದ ಮಾತ್ರದಿಂದಲೇ ಮುಖ ಕಮಲವು ಬಾಡಿದವಳಾಗಿ ತಲೆಯನ್ನುಬಗ್ಗಿಸಿ ನೆಲವನ್ನು ಕಾಲುಗುರಿನಿಂದ ಕರೆಯಲಾರಂಭಿಸಿದಳು. ಧರಿತ್ರಿಯನ್ನು ನೋಡಿ "ತಾಯಿ! ನನಗೆ ಚಲನಶಕ್ತಿಯು ನಿಶ್ಶೇಷವಾಗಿ ಹೋಗಿಬಿಟ್ಟಿತು. ನೀನಾದರೂ ನನ್ನನ್ನು ಈ ಸ್ಥಳಬಿಡಿಸಿ ಬೇರೆಕಡೆಗೆ ಕರೆದುಕೊಂಡು ಹೋಗಬಾರದೇ?" ಎಂದು ಹೇಳಿಕೊಂಡಳು.

ಭೂಮಾತೆಯು ಅವಳ ಮಾತನ್ನು ಕೇಳಿದಳು. ಶೋಭನೆಗೆ ಶರೀರದಲ್ಲಿ ಶಕ್ತಿಯುಂಟಾಯಿತು. ಶೋಭನೆಯು, ಆ ಸ್ಥಳವನ್ನು ಬಿಟ್ಟು ಬಹುವೇಗದಿಂದ ಅಂತಃಪುರದೊಳಗೆ ಪ್ರವೇಶಮಾಡಿದಳು.

ಶೋಭನೆಯು ಎಷ್ಟುಹೊತ್ತು ಆ ಸ್ಥಳದಲ್ಲಿದ್ದಳೋ ಅಷ್ಟುಹೊತ್ತು ನರೇಂದ್ರನೂ ರಪ್ಪೆಹಾಕದೇ ಒಂದೇ ದೃಷ್ಟಿಯಿಂದ ಅವಳನ್ನು ನೋಡುತಲಿದ್ದನು. ಪ್ರತಿ ಕ್ಷಣದಲ್ಲಿಯೂ ಅವನ ಮನದಲ್ಲಿ "ಈ ದೇವತಾಯೋಗ್ಯಳಾದ ಶೋಭನೆಯ ರೂಪಾನುಭವವು ಯಾರ ಅದೃಷ್ಟದಲ್ಲಿದೆಯೋ ಅವರು ನಿಶ್ಚಯವಾಗಿಯೂ ದೇವಾಂಶಸಂಭೂತರು. ಈ ರೂಪರಾಶಿಯು ನರಜನ್ಮದಲ್ಲಿ ಅಸಂಭವ. ಇದು ನರರಿಗೆ ಸಾಧ್ಯವಾಗುವುದೆಂದರೇನು? ಶೋಭನೆಯು ಈ ಸ್ಥಳದಿಂದ ಹೊರಟು ಹೋದಳು. ಅವಳ ಅನ್ಯಾದೃಶವಾದ ರೂಪವು ಕಣ್ಣೆದುರಿಗೆ ನಿಂತಂತಿದೆ." ಎಂದು ಮುಂತಾಗಿ ಧ್ಯಾನಮಾಡಲಾರಂಭಿಸಿದನು.

ಪ್ರಶ್ನಕರ್ತರ ಹೆಸರು—ಹರವಲ್ಲಭ ಚಟ್ಟೋಪಾಧ್ಯಾಯ. ಹರವಲ್ಲಭನು ಒಬ್ಬ ಧನವಂತನಾದ ಜಮೀನ್ದಾರನು. ನಂದನಪುರಕ್ಕೆ ಮೂರು ನಾಲ್ಕು ಹರಿದಾರಿಯ ದೂರದಲ್ಲಿ ಅವನ ಮನೆ. ಅವನಿಗೆ ಒಬ್ಬನೇ ಮಗ. ಆ ಮಗನಿಗೆ ಇನ್ನೂ ಮದುವೆಯಾಗಿರಲಿಲ್ಲ. ಶೋಭನೆಯನ್ನು ತನ್ನ ಮಗನಿಗೆ ಮದುವೆಮಾಡಿಕೊಳ್ಳುವುದಕ್ಕೆ ಹರವಲ್ಲಭನಿಗೆ ತುಂಬಾ ಇಷ್ಟವುಂಟಾಗಿ ರಮೇಶನನ್ನು ಕೇಳಿದನು. ಅದಕ್ಕೆ ರಮೇಶನು "ಹಾಗಾಗುವುದಾದರೆ ನನ್ನ ಪರಮಸೌಭಾಗ್ಯ, ಆ ವಿಷಯದಲ್ಲಿ ಮತ್ತಾವ ಸಂದೇಹವೂ ಪಡಬೇಕಾದ ಆವಶ್ಯಕವಿಲ್ಲ" ಎಂದು ಉತ್ತರಕೊಟ್ಟನು.

ಹರವಲ್ಲಭ—ನಮಗೂ ನಿಮಗೂ ಹೆಣ್ಣುಕೊಟ್ಟು ತೆಗೆದುಕೊಳ್ಳುವ ಸಂಪ್ರದಾಯವುಂಟು. ನಿಮ್ಮ ಕನ್ನೆಯನ್ನು ನಾವು ಸ್ವೀಕರಿಸುವುದಾದರೆ, ಮುಂದೆ ಹೇಳತಕ್ಕುದೇನಿದೆ!

ಶೋಭನೆಯ ವಿವಾಹವು ಒಂದುವಿಧದಲ್ಲಿ ನಿಶ್ಚಯವಾಗಿಹೋಯಿತು. ಕನ್ನೆಗೆ ಸರಿಯಾದ ವರನು ಸಿಕ್ಕಿದನೆಂದು ಮನೆಯಲ್ಲಿ ಎಲ್ಲರೂ ಸಂತೋಷಪಟ್ಟರು.

ಆದರೆ—ಒಬ್ಬನು ಮಾತ್ರ ಈ ವಿಷಯವನ್ನು ಕೇಳಿ ಮರ್ಮಾಹತನಾದನು. ಅವನಿಗೆ, ಪ್ರಪಂಚವೆಲ್ಲವೂ ಶೂನ್ಯವಾಗಿ ಘೋರಾಂಧಕಾರದಿಂದ ವ್ಯಾಪ್ತವಾದಂತೆ ಕಂಡುಬಂದಿತು. ಕ್ರಮವಾಗಿ ಅವನ ಶರೀರದಲ್ಲಿ ಶಕ್ತಿಯು ಕುಗ್ಗುತ್ತಾ ಬಂದಿತು. ಇವನು ಯಾರು? ನಮ್ಮ ಪೂರ್ವಪರಿಚಿತನಾದ ನರೇಂದ್ರನಾಥ. ನರೇಂದ್ರನ ತಲೆಯಮೇಲೆ ಆಕಾಶವೇ ಕಳಚಿಬಿದ್ದಂತಾಯಿತು. ತಾನಿದ್ದ ಸ್ಥಳ ಬಿಟ್ಟು ಬೇರೆ ಕಡೆಗೆ ಹೋಗಲು ಯತ್ನಮಾಡಿದನು. ಆದರೆ ಸಾಗದೇಹೋಯಿತು. ಅವನ ಹೃದಯದ ಆಶೆಯು, ಹೃದಯದಲ್ಲಿಯೇ ಇದ್ದು ಅವನನ್ನು ಬಹಳವಾಗಿ ಅಳುವಂತೆ ಮಾಡಿತು.

ರಮೇಶನ ಮನೆಗೆ ಬಂದಿದ್ದವರೆಲ್ಲರೂ ಕ್ರಮವಾಗಿ ತಂತಮ್ಮ ಮನೆಗಳಿಗೆ ತೆರಳಿದರು. ರಮೇಶನ ಕುಟುಂಬಕ್ಕೆ ಸೇರಿದ ಕೆಲವರು ಮಾತ್ರ ಮನೆಯಲ್ಲಿಯೇ ಇನ್ನೂ ಇದ್ದರು.

ನರೇಂದ್ರನಾಥನು, ಇನ್ನು ಅಲ್ಲಿ ಕುಳಿತುಕೊಳ್ಳುವುದಕ್ಕೆ ಅಸಾಧ್ಯವಾಗಿ, ಬೇರೆ ಚಿಕ್ಕಮನೆಗೆ ಹೋಗಿ ಒಂದು ಕುರ್ಚಿಯಮೇಲೆ ಕುಳಿತುಕೊಂಡನು. ಅಲ್ಲಿಯೂ ಬಹಳಹೊತ್ತು ಇರಲಾರದೇಹೋದನು. ಹಾಸಿಗೆಯಮೇಲೆ ಮಲಗಿ ಏನೇನೋ ಚಿಂತಿಸಿದನು. ಸ್ವಲ್ಪ ಹೊತ್ತಿನಮೇಲೆ ಅಲ್ಲಿಂದೆದ್ದು ಮನೆಯೊಳಗೆ ಪ್ರವೇಶಮಾಡಿದನು.

---

## ನಾಲ್ಕನೆಯ ಪರಿಚ್ಛೇದ

ಶೋಭನೆಯು ಅಂತಃಪುರದೊಳಗೆ ಪ್ರವೇಶಮಾಡಿದ ಮಾತ್ರದಿಂದಲೇ ಒಬ್ಬ ರಸಿಕಳಾದ ಹೆಂಗುಸು ಶೋಭನೆಯನ್ನು ನೋಡಿ "ಏನು ಜಮೀನ್ದಾರನ ಸೊಸೆ! ಇನ್ನು ಮೇಲೆ ನಮ್ಮೆಲ್ಲರನ್ನೂ ಮರೆಯಬೇಡವಮ್ಮ" ಎಂದಳು. ಅವಳ ಮಾತನ್ನು ಕೇಳಿ ಶೋಭನೆಯು ಹುಸಿನಗೆ ನಕ್ಕು ಅಲ್ಲಿಯೇ ತಲೆ ಬಗ್ಗಿಸಿಕೊಂಡು ನಿಂತುಕೊಂಡಳು.

ಪ್ರೌಢೆಯು "ಈ ಸಮಯದಲ್ಲಿ ನಿಮ್ಮ ತಾಯಿಯು ಬದುಕಿದ್ದರೆ ಅವಳು ಎಷ್ಟು ಸಂತೋಷಪಡುತಿದ್ದಳೋ!" ಎಂದಳು. ಶೋಭನೆಯು ತಾಯಿಯ ಮರಣವನ್ನರಿಯದೆ, ತನ್ನ ಮಲತಾಯಿಯಾದ ಸಾವಿತ್ರಿಯನ್ನೇ ತಾಯಿಯೆಂದು ನಂಬಿಕೊಂಡಿದ್ದಳು. ಸಾವಿತ್ರಿಯೂ ಸವತಿಯ ಮಗಳೆಂಬ ಭಾವನೆಯಿಂದ ಶೋಭನೆಯನ್ನು ದ್ವೇಷಿಸಿದವಳಲ್ಲ. ಪುತ್ರೀವಾತ್ಸಲ್ಯದಿಂದ ತನ್ನನ್ನು ಎಡೆಬಿಡದೆ ಕಾಪಾಡುತಿದ್ದುದನ್ನು ನೋಡಿ ಶೋಭನೆಯು ಸಾವಿತ್ರಿಯನ್ನು ತನ್ನ ತಾಯಿಯೆಂದೇ ತಿಳಿದು

ಕೊಂಡಿದ್ದಳು. ಆದರೇನು! ಪ್ರೌಢೆಯ ಮಾತನ್ನು ಕೇಳಿ ಶೋಭನೆಯ ಕಣ್ಣು ಗಳಲ್ಲಿ ನೀರು ತುಂಬಿಕೊಂಡು ಕ್ರಮವಾಗಿ ಧಾರಾಕಾರವಾಗಿ ನೀರು ಸುರಿಯಲಾರಂಭವಾಯಿತು. ಶೋಭನೆಯು ಮನಸ್ಸಿನಲ್ಲಿಯೇ "ನನ್ನಂತಹ ಹತಭಾಗಿನಿಯು ಜಗತ್ತಿನಲ್ಲಿ ಯಾರೂ ಇಲ್ಲ. ಸಂಸಾರಕ್ಕೆ ಸಾರವಾದ, ಬಾಲ್ಯದಲ್ಲಿ ಸಹಾಯಕಳಾದ, ಪೃಥಿವಿಯಲ್ಲಿ ಪ್ರತ್ಯಕ್ಷದೇವತೆಯಾದ ಮಾತೆಯು ನನಗೆ ಇಲ್ಲದೇ ಹೋದಳಲ್ಲ! ನಾನು ಬಹಳವಾಗಿ ನಿಸ್ಸಹಾಯಳು" ಎಂದು ಮುಂತಾಗಿ ಚಿಂತಿಸುತ್ತ ಗಳಗಳನೆ ಅಳಲಾರಂಭಿಸಿದಳು. ಶೋಭನೆಯು ಅಳುವುದನ್ನು ನೋಡಿ ಪ್ರೌಢೆಯು "ನಾನೆಂತಹ ಕೆಲಸಮಾಡಿಬಿಟ್ಟೆ! ಸಾವಿತ್ರಿಯ ಪ್ರೇಮದಲ್ಲಿ ಶೋಭನೆಯು ತನ್ನ ತಾಯಿಯನ್ನೇ ಮರೆತಿದ್ದಳು. ಅವಳ ತಾಯಿಯ ಮರಣವನ್ನು ಮತ್ತೆ ಜ್ಞಾಪಿಸಿ ಅವಳನ್ನು ಅಳುವಂತೆ ಮಾಡಿದೆನು. ನಾನು ಮಾಡಿದುದೇ ಒಂದು, ಆದುದೇ ಒಂದು," ಎಂದು ವ್ಯಸನಪಡುತ್ತಾ ಶೋಭನೆಯನ್ನು ಸಮಾಧಾನಪಡಿಸಲು ಯತ್ನಮಾಡಿದಳು. ಈ ವ್ಯಸನವು ಶೋಭನೆಯಲ್ಲಿ ಬಹಳಹೊತ್ತು ಸ್ಥಾಯಿಯಾಗಿರಲಿಲ್ಲ. ಶೋಭನೆಯು, ನರೇಂದ್ರನು ಬಳಿಗೆ ಬಂದುದನ್ನು ನೋಡಿದೊಡನೆಯೇ ಎಲ್ಲಾ ವ್ಯಸನವನ್ನೂ ಮರೆತುಬಿಟ್ಟಳು.

ನರೇಂದ್ರನ ಮನಸ್ಸು ಬಹಳ ಅಸ್ಥಿರವಾಗಿ ಹೋಯಿತು. ಅವನಿಗೆ ಇನ್ನು ಇಲ್ಲಿರಲು ಮನ ಒಡಂಬಡಲಿಲ್ಲ. ಒಂದೊಂದುವೇಳೆ ರಮೇಶನ ಮನೆಯು ತನ್ನ ವ್ಯಥೆಗೆ ತೌರುಮನೆ ಎಂದು ಬೋಧೆಯಾಗಲಾರಂಭಿಸಿತು. ನರೇಂದ್ರನ ಶರೀರವು ವಿಷಣ್ಣಭಾವವನ್ನು ಧರಿಸಿತು. ಕಣ್ಣುಗಳಲ್ಲಿ ಕಾಂತಿಯಿಲ್ಲ. ಮುಖದಲ್ಲಿ ಲಾವಣ್ಯವಿಲ್ಲ ಮಾತಿನಲ್ಲಿ ಮಾಧುರ್ಯವಿಲ್ಲ. ಪ್ರಾಣದಲ್ಲಿ ಸ್ಫೂರ್ತಿಯಿಲ್ಲ. ಸುಖದಲ್ಲಿ ಶಾಂತಿಯಿಲ್ಲ—ಶಾಂತಿಯಲ್ಲಿ ಸುಖವಿಲ್ಲ—ಇನ್ನು ಅಸಹ್ಯವಾದ ಯಾತನೆಯನ್ನು ತಡೆಯಲಾರದವನಾದನು. ರಮೇಶನ ಮನೆಯನ್ನು ಬಿಟ್ಟರೇನಾದರೂ ಕಿಂಚಿತ್ ಸುಖವಾಗುವುದೋ ಏನೋ ಎಂದು ಭಾವಿಸಿಕೊಂಡು ಸಾವಿತ್ರಿಯಿಂದ ಅಪ್ಪಣೆ ತೆಗೆದುಕೊಂಡು ಹೋಗುವುದಕ್ಕೋಸುಗ ಒಳಗೆ ಪ್ರವೇಶಮಾಡಿದನು. ಪ್ರವೇಶಿಸಿದೊಡನೆಯೇ ಶೋಭನೆಯು ದೃಷ್ಟಿಗೋಚರಳಾದಳು. ಇವನ ಹೃದಯದಲ್ಲಿ ವ್ಯಸನವು ದ್ವಿಗುಣವಾಯಿತು. ಇದರಿಂದ ಜೀವಂತನಾಗಿರುವುದೇ ಅಸಾಧ್ಯವಾಗಿ ಕಂಡುಬಂದಿತು. ಈ ಸಮಯದಲ್ಲಿ ಸಾವಿತ್ರಿಯನ್ನು ನೋಡುವುದು ಉಚಿತವಲ್ಲವೆಂದು ಬೇರೊಂದು ಕೊಠಡಿಯೊಳಗೆ ಪ್ರವೇಶ ಮಾಡಿದನು. ನರೇಂದ್ರನು ನೋಡಿದಾಗ ಶೋಭನೆಯು ಅಳುತಿದ್ದಳು. ಮತ್ತೊಬ್ಬ ರಸಿಕಳು ಅವಳನ್ನು ಅನುನಯಮಾಡುತಲಿದ್ದಳು.

ಪ್ರೌಢೆಯು ಶೋಭನೆಯನ್ನು ಸಂತೈಸಿದೊಡನೆಯೇ ಬೇರೆಕಡೆಗೆಹೋದಳು. ಇನ್ನೂ ಶೋಭನೆಯ ಕಣ್ಣುಗಳಲ್ಲಿ ಜಲವು ತುಂಬಿಕೊಂಡೇ ಇದ್ದಿತು. ಮತ್ತೆ

ಅಳಲಾರಂಭಿಸಿದಳು. ಅತ್ತು ಅತ್ತು ಸಾಕಾಯಿತು. ಸ್ವಲ್ಪಕಾಲದಮೇಲೆ ಶೋಭನೆಯು ತನ್ನ ಅಳುವನ್ನು ಸಮಾಧಾನಕ್ಕೆ ತಂದುಕೊಂಡು ತನ್ನ ಕಣ್ಣುಗಳಲ್ಲಿದ್ದ ಅಶ್ರುಕಣಗಳನ್ನು ಸೀರೆಯ ಸೆರಗಿನಿಂದ ಒರಸಿಕೊಳ್ಳಲಾರಂಭಿಸಿದಳು. ಈ ಹೊತ್ತಿಗೆ ಸರಿಯಾಗಿ ನರೇಂದ್ರನು ಅವಳನ್ನು ಕಂಡನು. ಶೋಭನೆಯು ನರೇಂದ್ರನನ್ನು ನೋಡಿದೊಡನೆಯೇ " ನರೇಂದ್ರ! ನೀನು ಈಗಲೇ ಮನೆಗೆ ಹೋಗುವಿಯಾ ? " ಎಂದಳು.

ನರೇಂದ್ರ—ಉತ್ತರವಿಲ್ಲ.

ಶೋಭನೆ—ನರೇಂದ್ರ ! ಈಗಲೇ ಮನೆಗೆ ಹೋಗಬೇಕೇನು ?

ನರೇಂದ್ರ—ಉತ್ತರವಿಲ್ಲ.

ನರೇಂದ್ರನು ಹಳೆಯಬಟ್ಟೆಯನ್ನು ಬಿಚ್ಚಿ ಹೊಸಬಟ್ಟೆಯನ್ನುಡಲು ಯತ್ನ ಮಾಡುತಿದ್ದನು.

ಇಷ್ಟರೊಳಗೆ ಸಾವಿತ್ರಿಯು ಅಲ್ಲಿಗೆ ಬಂದು—ಇದೇನು ನರೇಂದ್ರ! ಬೇರೆ ಬಟ್ಟೆಯನ್ನು ಧರಿಸುವೆ? ಎಂದಳು.

ಈ ಮಾತನ್ನು ಕೇಳಿ ನರೇಂದ್ರನು " ನಾನು ಮನೆಗೆ ಹೋಗುವೆನು " ಎಂದನು.

ಸಾವಿತ್ರಿ—ನೀನು ಮನೆಗೆ ಹೋಗಕೂಡದು. ಇಲ್ಲಿಯೇ ಇನ್ನೂ ಮೂರು ನಾಲ್ಕು ದಿನಗಳಿದ್ದು ಅನಂತರ ಮನೆಗೆ ಹೋಗು. ಇದೇನು! ನೀನು ಇಷ್ಟು ಸಂಕೋಚಪಡುವೆ! ನೀನೇನಾದರೂ ಕಂಡವರ ಮನೆಯಲ್ಲಿ ಇರುವೆಯಾ? ಶೋಭನೆ! ನೋಡು. ನರೇಂದ್ರನು ಹೋಗುತ್ತಾನಂತೆ; ಅವನನ್ನು ಇಲ್ಲಿಯೇ ಇರುವಂತೆ ಹೇಳಬಾರದೆ?

ಸಾವಿತ್ರಿಯ ಮಾತನ್ನು ಕೇಳಿ ಶೋಭನೆಯು ಸ್ವಲ್ಪ ನಕ್ಕಳು. ಆದರೆ ಆ ನಗುವು ಮಿಂಚಿನಂತೆ ಒಂದಾವರ್ತಿ ಅಧರಪ್ರಾಂತದಲ್ಲಿ ನರ್ತಿಸಿ ಆಕ್ಷಣವೇ ಲೀನವಾಗಿ ಹೋಯಿತು. ಆಮೇಲೆ ಶೋಭನೆಯು ಒಂದಾವರ್ತಿ ನರೇಂದ್ರನನ್ನು ಆದರದಿಂದ ನೋಡಿ ನಾಚಿಕೆಯಿಂದ ತಲೆಬಗ್ಗಿದವಳಾಗಿ, ನರೇಂದ್ರನ ಪದಾರ್ಥವೊಂದನ್ನು ತೆಗೆದುಕೊಂಡು ಆ ಸ್ಥಳದಿಂದ ಹೊರಗೆ ಹೊರಟು ಹೋದಳು.

ಸಾವಿತ್ರಿಯು ನಿಷೇಧಮಾಡಿದುದನ್ನು ನೋಡಿ ನರೇಂದ್ರನಾಥನು ರಮೇಶನನ್ನು ನೋಡಲು ಇಷ್ಟಪಡಲಿಲ್ಲ. ನರೇಂದ್ರನಾಥನು ತನ್ನ ಮನದಲ್ಲಿ ಹೀಗೆ

ನಿಶ್ಚಯಮಾಡಿಕೊಂಡನು. "ಶೋಭನೆಯ ಚಿಂತೆಯನ್ನೇ ಬಿಟ್ಟು ಬಿಡಬೇಕೆಂದು ಯತ್ನಮಾಡುತ್ತೇನೆ. ಆದರೆ ಅದು ಸಾಗದು. ಎಷ್ಟು ಚಿಂತಿಸಿದರೂ, ಅವಳು ನನ್ನ ಹಸ್ತಗತಳಾಗುವ ಸಂಭವವಿಲ್ಲ. ಅವಳ ದೇವದುರ್ಲಭವಾದ ರೂಪವು ಎರಡು ಮೂರು ದಿನದಲ್ಲಿಯೇ ಅನ್ಯಾಕ್ರಾಂತವಾಗಿಹೋಗುವುದು. ಇದು ನಿಶ್ಚಯ. ಹೊಂದಲಸಾಧ್ಯವಾದ ವಸ್ತುವಿನ ವಿಷಯದಲ್ಲಿ ಇಷ್ಟೇಕೆ ನಾನು ಕೊರಗಬೇಕು ? ವೃಥಾ ಚಿಂತೆಯಿಂದ ಶಾಶ್ವತವಾದ ವ್ಯಸನವೇ ಹೊರ್ತು ಮತ್ತು ಬೇರೆಯಿಲ್ಲ" ಎಂದು ಮುಂತಾಗಿ ನಾನಾವಿಧವಾಗಿ ಚಿಂತಿಸುತ್ತಾ ನರೇಂದ್ರನಾಥನು ರಮೇಶಬಾಬುವಿನಗೃಹವನ್ನು ತ್ಯಾಗಮಾಡಿ ತನ್ನ ಮನೆಯನ್ನು ಕುರಿತು ಹೊರಟುಹೋದನು.

---

## ಐದನೆಯ ಪರಿಚ್ಛೇದ

ನರೇಂದ್ರನಾಥನು ತನ್ನ ಮನೆಗೆ ಬಂದುಬಿಟ್ಟನು. ಆದರೂ ಅವನ ಮನಸ್ಸು ಶೋಭನೆಯನ್ನು ಬಿಡಲಾರದಾಗಿದ್ದಿತು. ಶೋಭನೆಯನ್ನು ಮರೆಯಲು ಮಾಡಬೇಕಾದ ಪ್ರಯತ್ನವೆಲ್ಲವನ್ನೂ ಮಾಡಿದುದಾಯಿತು. ಏನೂ ಪ್ರಯೋಜನವಾಗಲಿಲ್ಲ. ಪುಸ್ತಕಗಳನ್ನು ತೆಗೆದು ಓದಿದರೆ, ಶೋಭನೆಯ ಚಿಂತೆಯೇನಾದರೂ ದೂರವಾಗಬಹುದೊ ಏನೋ ಎಂದು ಓದಲಾರಂಭಿಸಿದನು. ಕ್ಷಣಕಾಲದಲ್ಲಿಯೇ ಅವುಗಳಲ್ಲಿ ಪರಮದ್ವೇಷಭಾವನೆಯು ಬೋಧೆಯಾಯಿತು. ಪುಸ್ತಕಗಳನ್ನು ದೂರ ಬೀಸಾಡಿದನು. ಹಾಸಿಗೆಯಮೇಲೆ ಮಲಗಿ ನೋಡಿದನು. ಬೆಂಕಿಯ ಕೆಂಡಗಳಮೇಲೆ ಮಲಗಿದಂತೆ ಉದ್ವಿಗ್ನನಾದನು. ನರೇಂದ್ರನು ಅತ್ತಿತ್ತ ಸುತ್ತಲಾರಂಭಮಾಡಿದನು. ಏತರಿಂದಲೂ ಶೋಭನೆಯು ಅವನ ಹೃದಯದೇಶವನ್ನು ಬಿಡುವಹಾಗೆ ಕಂಡುಬರಲಿಲ್ಲ. ಅವನಿಗೆ ಆಹಾರದಲ್ಲಿಯೂ, ವಿಹಾರದಲ್ಲಿಯೂ, ಕ್ರಮೇಣ ಸುಖತಪ್ಪುತ್ತಾ ಬಂದಿತು. ಪ್ರಾಣವು ಭಾರವಾಯಿತು. ದೇಹವು ದಿನೇದಿನೇ ಕ್ಷೀಣಪ್ರಭೆಯುಳ್ಳುದಾಯಿತು. ಮನೋವ್ಯಥೆಯು ನರೇಂದ್ರನನ್ನು ಬಲವತ್ತರವಾಗಿ ಆವರಿಸಿಕೊಂಡು ಅವನ ಮರ್ಮವನ್ನು ಕೊರೆಯಲಾರಂಭಿಸಿತು. ಈ ವ್ಯಥೆಯನ್ನು ಸಹಿಸುವುದು ಯಾರಿಂದತಾನೆ ಸಾಧ್ಯ? ಮಹಾಧೀರನಾದ ಮನುಷ್ಯನೂ ಈ ವ್ಯಸನದಿಂದ ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ತಲ್ಲಣಿಸುವನು. ಹುಡುಗನಾದ ನರೇಂದ್ರನ ವಿಷಯದಲ್ಲಿ ಹೇಳತಕ್ಕುದೇನಿದೆ? ನರೇಂದ್ರನಿಗೆ ಬದುಕುವುದಕ್ಕಿಂತಲೂ ಸಾಯುವುದೇ ಮೇಲೆಂದು ನಿಜವಾಗಿಯೂ ತೋರುವಷ್ಟು ದುಃಖವು ಹೆಚ್ಚಿ ಅವನನ್ನು ತಲ್ಲಣಿಸತೊಡಗಿತು. ಇನ್ನು 'ಅದನ್ನು ತಡೆಯುವುದು ಅಸಾಧ್ಯ. ವ್ಯಸನಕ್ಕೆ ತಕ್ಕ ಪ್ರತೀಕಾರಮಾಡದೇ ಇದ್ದರೆ ಅನರ್ಥ

ಪರಂಪರೆಗೆ ಗುರಿಯಾಗಬೇಕಾಗುವುದು. ಶೋಭನೆಯನ್ನು ಮತ್ತೊಂದಾವರ್ತಿಯಾದರೂ ಕಣ್ಣಿನಿಂದ ನೋಡಿಕೊಂಡು ಬರುವುದೇ ಸರಿಯೆಂದು ನರೇಂದ್ರನಿಗೆ ತೋರಿತು. "ನಾನು ಅವಳನ್ನು ಹೋಗಿ ನೋಡಿದರೂ ಅವಳು ನನ್ನೊಡನೆ ಮಾತನಾಡುವ ಸಂಭವವೇ ಇಲ್ಲ; ಆದರೂ ನಾನು ಹೋಗಿ ಒಂದುಬಾರಿ ನೋಡಿ ಬಂದುಬಿಡುವೆನು." ಹೀಗೆಂದು ಕೆಲವುವೇಳೆ ಚಿಂತಿಸುವನು, ಮತ್ತೆ ಕೆಲವು ವೇಳೆ ನೋಡುವುದು ಸರಿಯಾದುದಲ್ಲವೆಂದು ಭಾವಿಸಿ ಸುಮ್ಮನಾಗುವನು. ನರೇಂದ್ರನು ಶೋಭನೆಯ ವಿಷಯದಲ್ಲಿ ಹೇಗೆ ಕಾತರನಾಗಿದ್ದನೋ, ತದ್ವತ್ ಶೋಭನೆಯೂ ನರೇಂದ್ರನನ ನೋಡುವುದರಲ್ಲಿ ಕೇವಲ ಕಾತರಳಾಗಿ ಆಹಾರವಿಹಾರಗಳನ್ನು ತ್ಯಜಿಸಿ ಕೊರ¡ ತಲಿದ್ದಳು.

ಪರಮಕಾರುಣಿಕನಾದ ಭಗವಂತನಿಗೆ ಇವರಿಬ್ಬರ ಮನೋಭಿಪ್ರಾಯವೂ ತಿಳಿಯದೇ ಇರಲಿಲ್ಲ. ಕೆ ಿಕಾಲದಲ್ಲಿಯೇ ರಮೇಶಬಾಬುವಿನ ಮನೆಯಲ್ಲಿ ಮತ್ತೊಂದುತ್ಸವವು ಪ್ರಾಪ್ತವಾಯಿತು. ನರೇಂದ್ರನಿಗೆ ಆಹ್ವಾನವು ಬಂದಿತು. ನರೇಂದ್ರನು ಅಲ್ಲಿಗೆ ಹೋಗುವುದ್ಕಲ್ಲಿ ಕೇವಲ ಆತುರನಾಗಿದ್ದರೂ ಕಾಲೇ ಬಾರದು. ನರೇಂದ್ರನು ರಮೇಶನ ಮನೆಗೆ ಹೋಗಕೂಡದು. ಹೋದರೆ ಶೋಭನೆಯು ಕಣ್ಣಿಗೆ ಗೋಚರಳಾಗದೇ ಇರಳು. ಅನಂತರ ಮತ್ತಷ್ಟು ವ್ಯಸನಕ್ಕೆ ಭಾಜನವಾಗಬೇಕಾಗುವುದು, ಎಂದು ಚಿಂತಿಸುವನು. ಆದರೆ ಈ ವಿವೇಕವು ಎಷ್ಟುಹೊತ್ತುತಾನೆ ನೆಲೆಗೊಳ್ಳುವುದು ? ಶೋಭನೆಯ ದರ್ಶನಾಕಾಂಕ್ಷೆಯು ಬಲವತ್ತರವಾಗಲು, ರಮೇಶನಮನೆಗೆ ಹೋಗುವುದೇಸರಿಯೆಂದೂ ನಿಶ್ಚಯ ಮಾಡಿದನು. ರಮೇಶನ ಮನೆಗೆ ಬರುವಂತೆ ಹೇಳಿಕಳುಹಿಸಿರುವರು. ಹೋಗದೇ ಯಿದ್ದರೆ ಚೆನ್ನಾಗಿರಲಾರದು, ಅಲ್ಲಿಗೆ ಹೋಗಬೇಕಾದುದು ಯುಕ್ತವಾಗಿರುವುದು. ಅಲ್ಲಿಗೆ ಹೋದರೂ ಶೋಭನೆಯನ್ನು ನೋಡದೆಯಿದ್ದರೆಸರಿ. ಅವಳನ್ನು ನೋಡಿಆಗ ಬೇಕಾದ ಕೆಲಸತಾನೆ ಏನಿದೆ ? ಅವಳನ್ನು ನೋಡದೆಯೂ, ಅವಳೊಡನೆ ಮಾತನಾಡದೆಯೂ ಇದ್ದರೆ ಆಯಿತು. ಅವಳನ್ನು ನೋಡಿದಪಕ್ಷದಲ್ಲಿ ಹೃದಯ ಜ್ವಾಲೆಯು ಮತ್ತಷ್ಟು ಪ್ರಜ್ವಲಿತವಾಗುವುದು. ಅವಳನ್ನು ನೋಡದೆಯೇ ಅಲ್ಲಿನ ಕೆಲಸಕಾರ್ಯಗಳನ್ನು ಮಾಡಿಕೊಂಡು ಬಂದುಬಿಡುವುದು ಸರಿಯಾದುದೆಂದು ನರೇಂದ್ರನ ಮನಸ್ಸಿಗೆ ಹೊಳೆಯಿತು. ನರೇಂದ್ರನು ದೇವರು ಮಾಡಿಸಿದುದಾಗಲಿ ಎಂದು ನಿಶ್ಚಯಿಸಿ, ಬರಬೇಕೆಂದು ಹೇಳಿದ್ದ ದಿವಸಕ್ಕೆ ಸರಿಯಾಗಿ ರಮೇಶನ ಮನೆಗೆ ಹೋದನು.

ರಮೇಶನ ಮನೆಗೆ ಹೋದೊಡನೆಯೇ ನರೇಂದ್ರನು ಸಾವಿತ್ರಿಯನ್ನು ನೋಡಿದನು. ಶೋಭನೆಯು ನರೇಂದ್ರನನ್ನು ನೋಡಿದಳು. ನರೇಂದ್ರನು

ಮಾತ್ರ ಪ್ರಯತ್ನಪುರಸ್ಸರವಾಗಿ ಶೋಭನೆಯನ್ನು ನೋಡಲಿಲ್ಲ. ಸಾವಿತ್ರಿಯೊಡನೆ ಒಂದೆರಡು ಮಾತುಗಳನ್ನಾಡಿ, ಹೊರಗಣ ಮಹಲಿಗೆ ಬಂದುಬಿಟ್ಟನು.

ನೋಡುತಿದ್ದಹಾಗೆಯೇ, ದಿನಮಣಿಯು ಅಸ್ತಾಚಲಪ್ರಣಯಿಯಾದನು. ಪಶ್ಚಿಮದಿಗಂಗನೆಯು, ಭರ್ತನು ತನ್ನಲ್ಲಿಗೆ ಬರುವನೆಂದು ಪರಮಾನಂದಭರಿತೆಯಾಗಿ, ಅನುರಾಗವನ್ನು ತಾಳಿದಳು. ಸಂಧ್ಯಾಮಾರುತವು ಮನೋಮುಗ್ಧಕರವಾಗಿ ಬೀಸಲಾರಂಭವಾಯಿತು. ವೃಕ್ಷಪತ್ರಗಳು, ವಾಯುವಿನ ಮಂದಗಮನವನ್ನು ಅನುಮೋದಿಸುವಂತೆ ತಂತಮ್ಮ ಶಿರವನ್ನು ಅಂದೋಳನಮಾಡಲಾರಂಭಿಸಿದುವು. ವಾಚಕಮಹಾಶಯರೆ! ಸಂಧ್ಯಾವಾಯುವಿನಲ್ಲಿ ಲತಾವಿಶೇಷಗಳು ಎಷ್ಟು ಮಧುರವಾಗಿ ನರ್ತನಮಾಡುತಲಿರುತ್ತವೆ ಎಂಬುದನ್ನು ನೀವು ಯಾವಾಗಲಾದರೂ ನೋಡಿರಬಹುದೊ? ಚಿರಕಾಲ ಪ್ರವಾಸದಲ್ಲಿದ್ದು ಆಗತಾನೆ ಮನೆಯನ್ನು ಕುರಿತು ಬಂದ ಹೃದಯದಯಿತರ ಮುಖವನ್ನು ನೋಡಿ ಕಾಮಿನಿಯರು ಎಷ್ಟು ಮಧುರವಾಗಿ ನಲಿದಾಡುತಲಿರುವರೋ ತತೋಪ್ಯತಿಶಯವಾಗಿ ಲತೆಗಳು ತಮ್ಮ ಸ್ವಾಮಿಯಾದ ಮಂದಮಾರುತನು ಬಂದುದನ್ನು ನೋಡಿ ನರ್ತನಮಾಡಲಾರಂಭಿಸಿದುವು. ಲತೆಗಳಿಗೆ ತಮ್ಮ ಸ್ವಾಮಿಯಲ್ಲಿ ಅಕೃತ್ರಿಮವಾದ ವಿಶ್ವಾಸವಿರುವುದಲ್ಲವೆ! ಯಾವ ಯುವತೀಯುವಕರಲ್ಲಿ ಇಂತಹ ಅಕೃತ್ರಿಮವಾದ ವಿಶ್ವಾಸವೇರ್ಪಟ್ಟಿರುವುದೊ, ಆ ಯುವಕರೇ ಈ ಲೋಕದಲ್ಲಿ ಧನ್ಯರು!

ನಿಶಾದೂತಿಯು ತನ್ನ ಯಜಮಾನಿಗೆ ಅನುರೂಪನಾದ ಕಾಮುಕನ ಅನ್ವೇಷಣವನ್ನು ಮಾಡಲು ಪ್ರಪಂಚತಲದಲ್ಲಿ ತಲೆದೋರಿದಳು. ಒಂದೆರಡು ನಕ್ಷತ್ರಗಳು ತಂತಮ್ಮ ಅಲ್ಪ ಪ್ರಭೆಯಿಂದ ನಿಶೆಯನ್ನು ಸ್ವಾಧೀನೆಯನ್ನಾಗಿ ಮಾಡಿಕೊಳ್ಳಲು ಯತ್ನಮಾಡಿದುವು. ಇದನ್ನು ನೋಡಿ ಸಹಿಸಲಾರದೆ ಅನೇಕಾನೇಕ ನಕ್ಷತ್ರಗಳು ನಾನು ಮುಂದು ತಾನು ಮುಂದು ಎಂದು ಮಿನುಗಲಾರಂಭಿಸಿದುವು. ಆದರೆ ನಿಶಾಂಗನೆಯು, ಇಂತಹರು ಎಷ್ಟುಮಂದಿ ಬಂದರೆತಾನೆ ಸ್ವಾಧೀನೆಯಾದಾಳು! ಇಂತಹ ಅಲ್ಪ ಪ್ರಭೆಗೆಲ್ಲಾ ನಮ್ಮ ನಿಶೆಯು ಮೋಹಿಸತಕ್ಕ ಹೆಂಗುಸಲ್ಲ. ಅವಳಿಗೆ ಬೇರೊಬ್ಬ ರೂಪಾನುರೂಪನಾದ ವರನಲ್ಲಿ ಆದರವಿದ್ದಿತಾದುದರಿಂದ ಅವನನ್ನು ಕರೆತರಲು ತನ್ನ ದೂತಿಯನ್ನು ಮೊದಲು ಕಳುಹಿಸಿಕೊಟ್ಟಿದ್ದಳು. ವರನು ಬರುವುದು ಸ್ವಲ್ಪ ಸಾವಕಾಶವಾದುದರಿಂದ, ನಿಶಾಂಗನೆಯು ಆಗ್ರಹದಿಂದ ಘೋರರೂಪವನ್ನು ತಾಳಿ ಎಲ್ಲೆಲ್ಲಿಯೂ ತಾನೇತಾನಾಗಿ ಮೊರೆಯಲಾರಂಭಿಸಿದಳು. ಕ್ರಮವಾಗಿ ನಿಶಾಕಾಂತನು ತಲೆದೋರಿದನು. ನಿಶೆಯ ಆಗ್ರಹವೆಲ್ಲವೂ ಎಲ್ಲಿಯೋ ಮಾಯವಾಗಿಹೋಯಿತು. ಪ್ರಣಯಕೋಪವತಿಯರಾದ ಸ್ತ್ರೀಯರ ಸ್ವಭಾವವೆಲ್ಲಾ ಹೀಗೆಯೇ ಸರಿ. ನಿಶೆಯ ಕೋಪವೆಲ್ಲವೂ ಹೋದುದನ್ನು ನೋಡಿ ಚಂದ್ರನು ನಗಲಾರಂಭಿಸಿದನು. ಅವನೊಡನೆ ಜಗವೆಲ್ಲವೂ ಹಾಸ್ಯಮಯವಾಗಿ ಹೋಯಿತು.

ಪ್ರಕೃತಿಯೂ ಹಾಸ್ಯಮಯಿ. ನಿಶೆಯೂ ಹಾಸ್ಯಮಯಿ. ಎಲ್ಲವೂ ಆನಂದದಿಂದ ತುಂಬಿಹೋಗಿದೆ. ಎಲ್ಲೆಲ್ಲಿ ನೋಡಿದರೂ ಆನಂದದ ಮೇಲೆ ಆನಂದ. ಆನಂದವು ತಾನೇತಾನಾಗಿ ಭೂಮಂಡಲವನ್ನು ಆವರಿಸಿಕೊಂಡಿದೆ. ಈ ಸಮಯದಲ್ಲಿ ಆನಂದ ದಿಂದ ನಲಿದಾಡದೆ ಇರತಕ್ಕವರು ಯಾರು? ಯಾರಿಗೆ ಆನಂದದಲ್ಲಿ ಇಷ್ಟವಿಲ್ಲ. ಆಬಾಲವೃದ್ಧರೆಲ್ಲರೂ ಆನಂದದಲ್ಲಿ ಮುಳುಗಿಹೋಗಿರುತ್ತಾರೆ. ಶೋಭನೆ ಯೊಬ್ಬಳು ಮಾತ್ರ ಈ ಆನಂದಮಧ್ಯದಲ್ಲಿ ವ್ಯಸನದಿಂದ ಸಾಯುತಲಿರುವಳು. ಶೋಭನೆಯು ಮಹಡಿಯಮೇಲೆ ಕಿಟಕಿಯ ಹತ್ತಿರ ನಿಂತುಕೊಂಡು ಏನೋ ಆಲೋಚಿಸುತಲಿದ್ದಳು. ಅವಳ ಮೂರ್ತಿಯು ಕೇವಲ ವಿಷಣ್ಣವಾಗಿಯೂ, ಗಂಭೀರವಾಗಿಯೂ ಚಿಂತಾಯುಕ್ತವಾಗಿಯೂ, ಇದ್ದಿತು. ವಾಯುವು ಮೆಲ್ಲ ಮೆಲ್ಲನೆ ಬೀಸುತ್ತಾ ಅವಳ ಭ್ರಮರಕೃಷ್ಣವಾದ, ಆಲೋಲಾಯಮಾನವಾದ ಕೇಶ ರಾಶಿಯನ್ನು ಆಂದೋಳನಮಾಡಿಸುತ್ತಾ, ಅವಳ ಸರ್ವಾಂಗದಲ್ಲಿಯೂ ಕ್ರೀಡೆ ಮಾಡಲಾರಂಭಿಸಿತು.

ಶೋಭನೆಯು ಬಹಳಹೊತ್ತು ಏನೋ ಚಿಂತಿಸುತ್ತಾ ನಿಂತಿದ್ದಳು. ಅವಳ ದೃಷ್ಟಿಯು ಲಕ್ಷ್ಯಹೀನ. ಕೆಲವುವೇಳೆ ನಕ್ಷತ್ರರಾಶಿಯಿಂದ ಖಚಿತವಾದ ನೀಲಾ ಕಾಶದಲ್ಲಿಯೂ ಮತ್ತೆ ಕೆಲವುವೇಳೆ ಹಾಸ್ಯಮಯವಾದ ಪೃಥ್ವೀತಲದಲ್ಲಿಯೂ ದೃಷ್ಟಿಯನ್ನು ಚಲನಮಾಡಲಾರಂಭಿಸಿದಳು. ಸ್ವಲ್ಪಹೊತ್ತಿನಮೇಲೆ ಶೋಭ ನೆಯು ಅಲ್ಲಿಂದ ತೆರಳಿದಳು. ಏನೋ ಚಿಂತಿಸಿಕೊಂಡು ಮತ್ತೆ ಅಲ್ಲಿಗೇ ಬಂದು ನಿಂತಳು. ಅಲ್ಲಿ ನಿಂತುನಿಂತು ಸಾಕಾಗಿ ಕುಳಿತುಬಿಟ್ಟಳು.

"ನಾನೇನು ಪಾಪಮಾಡಿರುವೆನೋ! ಅವನು ನನ್ನೊಡನೆ ಒಂದು ಮಾತನ್ನಾ ದರೂ ಆಡಲಿಲ್ಲವಲ್ಲ. ಹೋಗಲಿ, ನನ್ನ ಮುಖವನ್ನು ಕೂಡ ನೋಡಲಾರದೇ ಹೋದನಲ್ಲ! ನನ್ನಂತಹ ನಿರ್ಭಾಗ್ಯಳು ಮತ್ತಾವಳಿರುವಳು? ಹಾ! ಧಿಕ್! ಆವ ಕರ್ಮಶೇಷದಿಂದ ಇನ್ನೂ ಈ ಪ್ರಪಂಚದಲ್ಲಿ ಜೀವಧಾರಣೆ ಮಾಡಬೇಕಾಗಿರು ವುದೋ!" ಎಂದು ಶೋಭನೆಯು ಚಿಂತಿಸಿದಳು.

ಬಳಿಕ ಆಕಾಶವನ್ನು ನೋಡಿದಳು. ಅಲ್ಲಿ ಉಜ್ಜ್ವಲಭಾವದಿಂದ ಒಂದು ನಕ್ಷತ್ರವು ಮಿನುಗುಟ್ಟುತ್ತಿದ್ದಿತು. ಆ ನಕ್ಷತ್ರವನ್ನು ನೋಡಿದಳು. ಆ ನಕ್ಷ ತ್ರವು ತನ್ನನ್ನು ಕಣ್ಣು ಸಂಜ್ಞೆಮಾಡಿ ಕರೆಯುವಂತೆ ಶೋಭನೆಗೆ ತೋರಿತು. ಮತ್ತೆ ನೋಡಿದಳು. ಅವಳಿಗೆ ಭಯವಾಯಿತು. ಅನಂತರ ತಲೆಯನ್ನು ಬಗ್ಗಿಸಿ ಬಿಟ್ಟಳು.

ಕ್ರಮವಾಗಿ ರಾತ್ರಿಯೂ ಗಂಭೀರವಾಗುತ್ತೆ ಬಂದಿತು. ಜನಗಳ ಕೋಲಾಹಲಧ್ವನಿಯು ಕ್ಷಣೇ ಕ್ಷಣೇ ಮಂದೀಭೂತವಾಯಿತು. ಅಲ್ಲಲ್ಲಿ ನಾಯಿಯು ಮಾತ್ರ ಬೊಗಳುತ್ತಲಿದ್ದಿತು. ವೃಕ್ಷಗಳ ಮೇಲೆ ಗೂಬೆಯು ಕೂಗಲಾರಂಭವಾಯಿತು. ಈ ಧ್ವನಿಗಳಿಂದ ರಾತ್ರಿಯ ನಿಶ್ಶಬ್ದತೆಯು ಕೆಲವು ವೇಳೆ ಭಂಗವಾಗುತ್ತಿದ್ದಿತು. ರಮೇಶನ ಮನೆಯಲ್ಲಿ ಒಬ್ಬೊಬ್ಬರಾಗಿ ನಿದ್ರೆಮಾಡಲು ಹಾಸಿಗೆ ಹಾಸುವ ಪ್ರಯತ್ನದಲ್ಲಿದ್ದರು. ಆಗ ಶೋಭನೆಯು, "ನರೇಂದ್ರನಾಥನನ್ನು ಒಂದಾವೃತ್ತಿಯಾದರೂ ನೋಡಿ ಅವನನ್ನು ಮಾತನಾಡಿಸುವೆನು. ಅವನು ಮಾತನಾಡದೇಹೋದರೆ, ಅವನ ಪಾದಪ್ರಾಂತ್ಯದಲ್ಲಿ ಶಿರವನ್ನಿಟ್ಟು, ನನ್ನ ತಪ್ಪೇನಿದ್ದರೂ ಕ್ಷಮಿಸಬೇಕೆಂದು ಪ್ರಾರ್ಥನೆ ಮಾಡಿ ಅವನ ದಯೆಗೆ ಪಾತ್ರಳಾಗುತ್ತೇನೆ," ಎಂದು ನಿಶ್ಚಯಿಸಿಕೊಂಡು ಎದ್ದಳು. ಮಹಡಿಯಿಂದ ಕೆಳಗೆ ಇಳಿದಳು. ಒಂದಾವರ್ತಿ ಒಳಗಣ ಮಹಲನ್ನು ಸುತ್ತಿಹಾಕಿ ಹೊರಗಣ ಮಹಲಿಗೆ ಬಂದಳು. ಎಲ್ಲರೂ ಬಾಗಿಲು ತೆರೆದು ನಿದ್ರಾಭಿಭೂತರಾಗಿದ್ದರು, ಒಂದು ಕೊಠಡಿಯ ಬಾಗಿಲು ಮಾತ್ರ ಹಾಕಿದ್ದಿತು. ಒಳಗೆ ಚಿಲುಕ ಹಾಕಿರಲಿಲ್ಲ. ಬಹುಶಃ ಈ ಕೊಠಡಿಯಲ್ಲಿ ನರೇಂದ್ರನಾಥನು ಮಲಗಿರಬಹುದೆಂದು ತಿಳಿದುಕೊಂಡು ಮತ್ತೆ ಒಳಗಣ ಮಹಲಿಗೆ ಬಂದಳು. ಬಂದವಳು ತನ್ನ ಮಲಗುವ ಮನೆಗೆ ಹೋಗಿ ಹಾಸಿಗೆಯಲ್ಲಿ ಮಲಗಿಕೊಂಡಳು.

ಕ್ರಮವಾಗಿ ಅರ್ಧರಾತ್ರವಾಯಿತು. ಶೋಭನೆಯ ಕಣ್ಣಿಗೆ ನಿದ್ರೆಮಾತ್ರ ಹತ್ತಲಿಲ್ಲ. ಮರ್ಮಭೇದಿಯಾದ ದಾರುಣವಾದ ಬೆಂಕಿಯು ಅವಳ ಹೃದಯವನ್ನು ಆವರಣಮಾಡಿತ್ತಾದುದರಿಂದ ನಿದ್ರೆಯು ಸವತಿಯ ಸ್ಪರ್ಧೆಯಿಂದಲೋ ಎಂಬಂತೆ ದೂರವಾಗಿ ಹೋಯಿತು. ಶೋಭನೆಯು ಏನೇನೋ ಚಿಂತಿಸಿದಳು. ನರೇಂದ್ರನನ್ನು ನೋಡಲು ಇದೇ ಸಮಯವೆಂದು ಚಿಂತಿಸಿ ಹೊರಡಲು ಯತ್ನ ಮಾಡುತ್ತಿರಲು, ಯಾವುದೋ ಪದಧ್ವನಿಯನ್ನು ಕೇಳಿ ಮತ್ತೆ ಸುಮ್ಮನಾದಳು. ಮತ್ತೆ ಏಳುವಳು, ಮತ್ತೆ ಕಾರಣಾಂತರದಿಂದ ಮಲಗಿಕೊಳ್ಳುವಳು. ಇವಳ ದುರಂತವಾದ ಅವಸ್ಥೆಯನ್ನು ನೋಡಿ, ನಿದ್ರೆಯ ಸಹಚರಿಯಾದ ಚತುರೆಯಾದ ತಂದ್ರೆಯು, ತನ್ನ ಮೋಹಿನೀ ಶಕ್ತಿಯನ್ನು ಶೋಭನೆಯಲ್ಲಿ ಬೀರಿದಳು. ಶೋಭನೆಯು ಆ ಶಕ್ತಿಗೆ ವಶವಾಗುತ್ತಿರುವುದನ್ನು ನೋಡಿ ನಿದ್ರೆಯು ಇದೇ ಸಮಯವೆಂದು ಶೋಭನೆಯನ್ನು ಆವರಿಸಿಕೊಂಡುಬಿಟ್ಟಳು. ಶೋಭನೆಗೆ ನಿದ್ರೆ ಹತ್ತಿತು. ಆಗ ಅವಳನ್ನು ನೋಡಿದ್ದರೆ, ಸ್ಥಿರಭಾವವನ್ನು ತಾಳಿ ಭೂಮಿಯಲ್ಲಿ ನೆಲೆಸಿರುವ ಮಿಂಚಿನ ಹೊಳಪೋ! ಅಥವಾ ನಿಪುಣನಾದ ಶಿಲ್ಪಿಯಿಂದ ನಿರ್ಮಿತವಾದ ನಾನಾಲಂಕಾರ ಭೂಷಿತವಾದ ದೇವಮೂರ್ತಿಯೋ! ಎಂದು ಭ್ರಾಂತಿಯುಂಟಾಗುತಲಿದ್ದಿತು. ಅವ್ಯಾಜಮನೋಹರವಾದ ಅವಳಾಮೂರ್ತಿಯನ್ನು ಮತ್ತಾರಾದರೂ ನೋಡಿದ್ದರೆ ಅಲ್ಲಿಯೇ ಪಾಷಾಣದಿಂದ ಮಾಡಿದ ಬೊಂಬೆಯಂತೆ ನಿಷ್ಪಂದವಾಗಿ

ಹೋಗುತಲಿದ್ದರು. ವಿಧಾತನೇ! ನೀನು ರೂಪವೆಂಬುದನ್ನು ನಿರ್ಮಾಣಮಾಡಿ ಜಗವನ್ನೆಲ್ಲವನ್ನೂ ಆಲೋಹನಿಗಳದಿಂದ ಬಂಧಿಸಿರುವೆ. ನಿನ್ನ ಪ್ರಭಾವವನ್ನು ಎಷ್ಟು ಶ್ಲಾಘಿಸಿದರೂ ಸ್ವಲ್ಪವೇ!

ಶೋಭನೆಯು ನಿದ್ರೆಯಲ್ಲಿ ಅಭಿಭೂತೆಯಾಗಿಹೋಗಿದ್ದಾಳೆ. ಅವಳಿಗೆ ಹೃದಯ ದಲ್ಲಿ ಆ ಜ್ವಾಲೆಯಿಲ್ಲ. ಆ ಭಾವವಿಲ್ಲ. ಆದರೂ ಮಧ್ಯೇ ಮಧ್ಯೇ ಅಳುವಳು. ಒಂದೊಂದು ವೇಳೆ ನಗುವಳು. ಇದು ಯಾವುದನ್ನೂ ಅವಳು ಅರಿಯಳು. ಆಗಾಗ ಏನೇನೋ ಮಾತನಾಡಿಕೊಳ್ಳುವಳು. ಶೋಭನೆಯು ಇಂತಹ ಅವಸ್ಥೆ ಯಲ್ಲಿದ್ದರೂ, ಅವಳ ರೂಪವನ್ನು ಯಾರು ತಾನೇ ವರ್ಣಿಸಬಲ್ಲರು? ಎಂತಹ ಕವಿಯಾದರೂ ಇವಳ ಸೌಂದರ್ಯವರ್ಣನೆಯಲ್ಲಿ ಮೂಕ ಭಾವವನ್ನು ತಾಳದೇ ಇರನು. ಆದರೆ ಒಬ್ಬ ಪ್ರಸಿದ್ಧ ಕವಿಯು ಮಾತ್ರ ಹೀಗೆಂದು ವರ್ಣನೆ ಮಾಡಿರು ವನು.

ಊರ್ವಶೀ ರತಿರಂಭಾದಿ-ನಿರ್ಮಾಣಾ ಭ್ಯಸ್ತ ಕರ್ಮಣಃ ।
ಬ್ರಹ್ಮಣೋ ನನು ಯುಕ್ತೈವ । ಸೃಷ್ಟಿರನ್ಯಾದೃಶೀದೃಶೀ ॥

ಅರ್ಥ—ಊರ್ವಶೀ, ರತಿ, ರಂಭಾ ಮೊದಲಾದ ಅನೇಕಾನೇಕರೂಪ ವತಿಯರಾದ ಹೆಂಗುಸರನ್ನು ಸೃಷ್ಟಿಮಾಡಿ, ಕ್ರಮೇಣ ಸೃಷ್ಟಿಕರ್ಮದಲ್ಲಿ ಅದ್ವಿ ತೀಯ ಪಾಂಡಿತ್ಯವನ್ನು ಸಂಪಾದನೆಮಾಡಿದ ಬ್ರಹ್ಮನಿಗೆ ಈ ಅನನ್ಯ ಸಾಧಾರಣ ವಾದ ಸೃಷ್ಟಿಯು ಯುಕ್ತವಾದುದು. ಹಾಗಿಲ್ಲದಿದ್ದರೆ, ಇಂತಹ ಸೃಷ್ಟಿಯೇ ಅಸಂಭವವೆಂದು ತಾತ್ಪರ್ಯ.

ನಿದ್ರೆ! ನಿನ್ನ ಮೋಹನಶಕ್ತಿಯು ಎಂತಹುದು? ನಿನ್ನ ಶಕ್ತಿಗೆ ವಶ ವಾಗದವರೇ ಇಲ್ಲ. ನಿದ್ರೆ! ನೀನು ಸಂತಾಪಕರಿಗೆ ಪರಮಬಂಧು. ದರಿದ್ರರಿಗೆ ಸಹಾಯ, ರೋಗಿಗೆ ವಿಶ್ರಾಂತಿಯು, ವಿಶ್ರಾಂತಿಯಲ್ಲಿ ನೀನು ಪರಮಸುಖ. ಎಲ್ಲಿ ಸಹಿಸಲಸಾಧ್ಯವಾದ ಕಷ್ಟದ ಜ್ವಾಲೆಯೋ, ಎಲ್ಲಿ ರೋಗಶೋಕದ ಜ್ವಾಲೆಯೋ, ಎಲ್ಲಿ ಸಂಸಾರಜ್ವಾಲೆಯೋ, ಎಲ್ಲಿ ದುರ್ದಮನೀಯವಾದ ಕಾಮನಾ, ಆಶಾ ಇವೇ ಮುಂತಾದುವುಗಳಿಂದ ಮನಕ್ಕೆ ಸ್ವಲ್ಪವೂ ತೃಪ್ತಿಯಿಲ್ಲವೊ, ಅಲ್ಲಿ ನೀನು ಸಿದ್ಧೌ ಷಧಿ. ನಿನ್ನ ಶಕ್ತಿಯಿಂದ ಜನರು ಎಲ್ಲವನ್ನೂ ಮರೆತುಬಿಡುವರು. ನೀನಿದ್ದರೆ ರೋಗ, ಶೋಕ, ಪರಿತಾಪ, ಬಂಧನ, ವ್ಯಸನ ಇವುಗಳು ಯಾವುವೂ ಮನಸ್ಸಿನಲ್ಲಿ ಆಧಿಪತ್ಯಮಾಡಲು ಅಂಜುವುವು. ಯಾವತ್ಪರ್ಯಂತ ನೀನು ಮಾನವರಲ್ಲಿ ಏಕಾಧಿ ಪತ್ಯವನ್ನು ಮಾಡುತಲಿರುವೆಯೋ ಅಲ್ಲಿನ ವರೆಗೂ, ಜನಗಳು, ಸ್ವರ್ಗಸುಖವನ್ನು ಅನುಭವಿಸುವರು. ನಿನ್ನ ಪ್ರಭಾವವು ಕಡಮೆಯಾದ ಹಾಗೆಲ್ಲಾ, ಮನುಷ್ಯರ ಹೃದಯವು ಅಸ್ಥಿರವಾಗುತ್ತಾಬಂದು, ತಾಪತ್ರಯಕ್ಕೆ ತವರ್ಮನೆಯಾಗುವುದು.

ಪೂರ್ವಸ್ಮೃತಿ ಎಂಬುದು ಎಷ್ಟು ವ್ಯಸನಪ್ರದಾಯಕವು. ಪೂರ್ವಸ್ಮೃತಿಯ ಏಕ ಮಾತ್ರ ಅಂಶವು ಹೃದಯವನ್ನು ಆವರಿಸಿದರೆ ದೇಹವೆಲ್ಲವನ್ನೂ ಸುಟ್ಟು ಭಸ್ಮ ಮಾಡಿಬಿಡುವುದು; ಆರಿಸಿದರೂ ಹೋಗದು. ಪೂರ್ವಸ್ಮೃತಿಯ ದಹನಶಕ್ತಿ ಯು ದುರಂತವಾದುದು. ಇದರಿಂದಲೇ ಜೂಲಿಯಸ್‌ಸೀಜರ್ ಬದ್ಧನಾದನು, ಟ್ರಾಯಿ ಹಾಳಾಯಿತು, ರೋಮ್ ಧ್ವಂಸವಾಯಿತು, ವಿಪುಲವಾದ ರಾವಣನ ವಂಶವು ನಿರ್ನಾಮವಾಯಿತು. ಈ ಪೂರ್ವಸ್ಮೃತಿಯ ಜ್ವಾಲೆಯಿಂದಲೇ ಭಾರತ ರಾಜ್ಯವು ಉತ್ಸನ್ನವಾಗಿ ಹೋಯಿತು. ಇದರಿಂದಲೇ ಪ್ರತಿ ಮನೆಯಲ್ಲಿಯೂ, ಹಾಹಾಕಾರವೆದ್ದಿತು. ಇಂತಹ ವಿನಾಶಕಾರಿಣಿಯಾದ ಪೂರ್ವಸ್ಮೃತಿಯನ್ನು ಮರೆಯುವುದಕ್ಕೆ ಯಾರಿಂದಲೂ ಆಗಲಾರದು.

ಶೋಭನೆಯ ಸಮಸ್ತವಾದ ಆಶೆಯೂ ಮನದಲ್ಲಿಯೇ ಅಡಗಿತು. ಇದ್ದಕ್ಕಿದ್ದ ಹಾಗೆಯೇ ಪೂರ್ವಾಕಾಶದಲ್ಲಿ ಅರುಣನು ತಲೆದೋರಿದನು. ನಕ್ಷತ್ರಗಳು ಹೀನಪ್ರಭೆಗಳಾದುವು. ಅಂಧಕಾರವಾದರೋ ಇನ್ನು ನಿಲ್ಲಲಾರದೇ ಹೋಗಿ ಕ್ರಮವಾಗಿ ಎಲ್ಲಿಯೋ ಮಾಯವಾಗಿಹೋಯಿತು, ಪಕ್ಷಿಗಳು ತಂತಮ್ಮ ಅವ್ಯಕ್ತ ಮಧುರವಾದ ಧ್ವನಿಯಿಂದ ಅರುಣದೇವನನ್ನು ಕೊಂಡಾಡಿದುವು. ಇವುಗಳ ಮಧುರಗಂಭೀರಗಾನದಿಂದ ಕ್ಷಣಕಾಲದಲ್ಲಿಯೇ ಗಗನಮಂಡಲವೆಲ್ಲವೂ ತುಂಬಿ ಹೋಯಿತು. ಇಂತಹ ಮಂಗಳವಾದ್ಯಗಳೊಡನೆ ಸೂರ್ಯದೇವನು ಗಗನಾಂಗಣ ವನ್ನು ಅಡರಿದನು. ಜಗವೆಲ್ಲವೂ ಪುನರುದ್ಭಾಸಿತವಾಯಿತು. ಪ್ರಭಾತವಾಯುವು ಕಮಲಿನಿಯನ್ನು ಎಚ್ಚರಗೊಳಿಸಿ ಎಲ್ಲಿಯೋ ಓಡಿಹೋಯಿತು. ರಮೇಶಬಾಬುವಿನ ಮನೆಯಲ್ಲಿ ಒಬ್ಬೊಬ್ಬರಾಗಿ ಏಳಲಾರಂಭಿಸಿದರು. ಶೋಭನೆಯು ಮಾತ್ರ ಇನ್ನೂ ಏಳಲಿಲ್ಲ. ಸೂರ್ಯನ ಸ್ನಿಗ್ಧವಾದ ಹೇಮೋಜ್ಜ್ವಲ ಕಿರಣರಾಶಿಯು, ಕಿಟಕಿಯ ಮುಖಾಂತರ ಮನೆಯೊಳಗೆ ಬಂದು ಶೋಭನೆಯ ಅನಿಂದ್ಯವಾದ ಮುಖದ ಮೇಲೆ ನರ್ತನ ಮಾಡಲಾರಂಭಿಸಿತು. ಒಂದೊಂದುವೇಳೆ ಭ್ರಮರ ಕೃಷ್ಣ ವಾದ ಶೋಭನೆಯ ಕೇಶರಾಶಿಯೊಡನೆ ದ್ವಂದ್ವವನ್ನು ಮಾಡುತಲಿದ್ದಿತು.

ಕ್ರಮವಾಗಿ ಶೋಭನೆಗೆ ನಿದ್ರಾಭಂಗವಾಯಿತು. ಅವಳು ತತ್‌ಕ್ಷಣವೇ ಶಯ್ಯೆಯನ್ನು ತ್ಯಾಗಮಾಡಿ ಹೊರಗಣ ಮಹಲಿಗೆ ಬಂದಳು. ಎಲ್ಲರೂ ಹಾಸಿಗೆ ಯಿಂದ ಎದ್ದಿದ್ದರು. ಯಾವ ಕೊಠಡಿಯಲ್ಲಿ ನರೇಂದ್ರನಾಥನು ಶಯ್ಯಾಗತ ನಾಗಿದ್ದನೋ, ಅಲ್ಲಿಗೆ ಹೋಗಿ ನೋಡಲು, ಬಾಗಿಲು ತೆರದಿದ್ದಿತು. ಹಾಸಿಗೆಯಲ್ಲಿ ಯಾರೂ ಇರಲಿಲ್ಲ. ಇದನ್ನು ನೋಡಿ ಶೋಭನೆಯು ವಿಸ್ಮಿತೆಯಾದಳು. ಶೋಭ ನೆಯ ತಲೆಯ ತಿರುಗಲಾರಂಭವಾಯಿತು. ಮತ್ತೆ ಚಿಂತೆಯು ಅವಳನ್ನು ಎಂದಿ

ನಂತೆ ಆವರಿಸಿತು. ಶೋಭನೆಯು ಅತಿಪ್ರಯಾಸದಿಂದ ಅಲ್ಲಿಂದ ಹೊರಟು ಮುಖವನ್ನು ತೊಳೆದುಕೊಂಡಳು. ಏನುಮಾಡಿದರೂ ಚಿಂತೆಯು ಅವಳನ್ನು ಮಾತ್ರ ಬಿಡಲಿಲ್ಲ. ಪಾಪಿನಿಯಾದ ನಿದ್ರೆಯು ತನ್ನನ್ನು ಮೋಸಪಡಿಸಿದುದಕ್ಕೋಸುಗ ಶೋಭನೆಯು ನಿದ್ರೆಯನ್ನು ಬಹಳವಾಗಿ ನಿಂದಿಸಿದಳು. ರಾತ್ರಿಯಲ್ಲಿಯೇ ನರೇಂದ್ರನನ್ನು ನೋಡದೆಯಿದ್ದುದಕ್ಕೋಸುಗ ತನ್ನನ್ನು ತಾನೇ ಬಹಳವಾಗಿ ನಿಂದಿಸಿಕೊಂಡಳು. ಮನದ ಆವೇಗವು ನಿಲ್ಲದೆ ಶೋಭನೆಯು ನರೇಂದ್ರನನ್ನು ಹುಡುಕಲು ಹೊರಟಳು. ಆದರೆ ಎಲ್ಲಿಯೂ ನರೇಂದ್ರನು ಗೋಚರನಾಗಲಿಲ್ಲ. ಮಧ್ಯೇ ಮಧ್ಯೇ ಬೆಚ್ಚಿಬೀಳುತಿದ್ದಳು. ನರೇಂದ್ರನು ಪುಷ್ಕರಿಣಿಯ ಕಡೆ ಹೋಗಿರಬಹುದೆಂದು ಭಾವಿಸಿ ಅತ್ತಕಡೆ ನೋಡಿದಳು. ಕಮಲಪುಷ್ಪಗಳು ಆನಂದದಿಂದ ಅಂದೋಳನಮಾಡುತಲಿದ್ದವು. ಕೆಲವು ಅರಳಿದ್ದುವು. ಕೆಲವು ಅರಳುತಲಿದ್ದವು. ಇದನ್ನು ನೋಡಿ ಶೋಭನೆಗೆ ಮತ್ತಷ್ಟು ವ್ಯಸನವಾಯಿತು. ತಾನು ಇಂತಹ ಸಂತೋಷದಿಂದ ಎಂದಿಗೂ ವಂಚಿತಳಾಗಿಯೇ ಇರಬೇಕಾಯಿತಲ್ಲಾ ! ಎಂದು ಬಹಳವಾಗಿ ದುಃಖಪಟ್ಟಳು. ಅಳುವೂ ಬಂದಿತು. ಇವಳು ಅತ್ತುದನ್ನು ಯಾರೂ ನೋಡಲಿಲ್ಲ. ಮತ್ತೆ ಶೋಭನೆಯು ಧೈರ್ಯವನ್ನು ತೆಗೆದುಕೊಂಡು ಮಹಡಿಯನ್ನು ಹತ್ತಿಹೋದಳು. ಅಲ್ಲಿ ನಾಲ್ಕು ದಿಕ್ಕುಗಳಲ್ಲಿಯೂ ಹುಡುಕಿದುದಾಯಿತು. ಎಲ್ಲಿಯೂ ನರೇಂದ್ರನಿಲ್ಲ. ಮತ್ತೆ ಹುಡುಕಿದಳು. ಆದರೂ ಎಲ್ಲಿಯೂ ನರೇಂದ್ರನಿಲ್ಲ. ಶೋಭನೆಗೆ ವ್ಯಸನವು ಬಲವತ್ತರವಾಗಿ ಹೃದಯವು ನಡುಗಲಾರಂಭಿಸಿತು. "ನಾನು ಎಂತಹ ಹತಭಾಗೆಯು, ನಿದ್ರೆಯು ನನ್ನನ್ನು ಹೀಗೆ ಮೋಸಪಡಿಸಬಹುದೇ ! ನಾನೇತಕ್ಕೆ ನಿದ್ರೆಗೆ ವಶಳಾದೆನು ? ಅಥವಾ ನಿದ್ರೆಯು ನನ್ನನ್ನು ದೀರ್ಘಶಾಯಿನಿಯನ್ನಾಗಿ ಮಾಡಲಿಲ್ಲವೇಕೆ ? ದೀರ್ಘನಿದ್ರೆಯಿಂದ ನನ್ನ ಕಷ್ಟಗಳೆಲ್ಲವೂ ಮಾಯವಾಗುವ ಸಂಭವವಿದ್ದಿತು. ಹಾ ದೈವವೆ ! ನನ್ನನ್ನು ಏತಕ್ಕೆ ಸಂಕಟಪಡಿಸುವೆ ? ನಾನು ದುರಂತವಾದ ವ್ಯಸನವನ್ನು ತಡೆಯಲಾರದ ಬಾಲೆ. ನನ್ನ ವಿಷಯದಲ್ಲಿ ನಿನಗೂ ಕರುಣೆ ಬಾರದೆ ! ಎಂದುಕೊಂಡು ಮತ್ತೆ ನರೇಂದ್ರನನ್ನು ಹುಡುಕಲು ಹೊರಟುಹೋದಳು.

---

## ಆರನೆಯ ಪರಿಚ್ಛೇದ

ಶೋಭನೆಯು ನರೇಂದ್ರನನ್ನು ಹುಡುಕುತಿದ್ದಾಗ, ನರೇಂದ್ರನು ಹೊರಗಿನ ಮಹಲಿನ ಮಹಡಿಯ ಮೇಲೆ ಒಂದುಕಡೆ ತಲೆಯ ಮೇಲೆ ಕೈಯನ್ನಿಟ್ಟುಕೊಂಡು ಚಿಂತಾಸಾಗರದಲ್ಲಿ ಮುಳುಗಿ ಕುಳಿತಿದ್ದನು. ರಾತ್ರಿಯೆಲ್ಲಾ ನಿದ್ರೆಯಿಲ್ಲದುದರಿಂದ ಅವನ ಕಣ್ಣುಗಳೆರಡೂ ರಕ್ತವರ್ಣವಾಗಿದ್ದುವು. ಅವನ ಹೃದಯದಲ್ಲಿ ಬಿಂದು

ಮಾತ್ರವೂ ಸುಖವಿಲ್ಲ. ಜೀವನವೇ ಭಾರವಾಗಿ ಸಹಿಸಲು ಅಸಾಧ್ಯವಾಗಿರುವಾಗ ಅವನ ಮನದಲ್ಲಿ ಶಾಂತಿಯೆಲ್ಲಿಯದು ? ನಿರಂತರದಲ್ಲಿಯೂ ನೂರಾರು ಚೇಳುಗಳು ಕಚ್ಚುತಲಿದ್ದರೆ ಮನುಷ್ಯನಿಗೆ ಶಾಂತಿಯೆಲ್ಲಿಯದು ? ನರೇಂದ್ರನು ತೀವ್ರಯಾತನೆಯಿಂದ ರಾತ್ರಿಯೆಲ್ಲವೂ ತಿರುಗಾಡುತ್ತ ಕಾಲಹರಣಮಾಡಿದನು. ಒಂದಾವರ್ತಿಯಾದರೂ ಹಾಸಿಗೆಯಲ್ಲಿ ಶಯನಮಾಡಲಿಲ್ಲ. ಅದುಕಾರಣವೇ ಬೆಳಗಾಗುವುದಕ್ಕೆ ಮುಂಚೆ ಮಹಡಿಯ ಮೇಲೆ ಹೋಗಿ ಕುಳಿತುಕೊಂಡನು. ಶೋಭನೆಯು ಬಹಳವಾಗಿ ಹುಡುಕಿ ಹುಡುಕಿ ಕೊನೆಗೆ ನರೇಂದ್ರನಾಥನನ್ನು ಕಂಡಳು. ನೋಡಿದೊಡನೆಯೇ ಪರಮಾನಂದಭರಿತೆಯಾದಳು. ಅವಳ ಮನದಲ್ಲಿ ಏನೇನೋ ಭಾವಗಳು ಅಂಕುರಿತವಾದವು. ಶೋಭನೆಯು ಮೆಲ್ಲಮೆಲ್ಲನೆ ಮಹಡಿಯ ಮೆಟ್ಟಲನ್ನು ಹತ್ತಿ ನರೇಂದ್ರನ ಹಿಂದುಗಡೆ ಹೋಗಿ ನಿಂತಳು. ಆಗ ನರೇಂದ್ರನು ಚಿಂತಿಸುತಲಿದ್ದನು. "ನಾನೊಬ್ಬ ಹಣಗಾರನ ಮಗನಾಗಿದ್ದರೆ, ದೇವದುರ್ಲಭವಾದ ರತ್ನವೂ ನನ್ನ ಕೈವಶವಾಗುತಲಿತ್ತು. ನಾನೇತಕ್ಕೆ ದರಿದ್ರನ ಹೊಟ್ಟೆಯಲ್ಲಿ ಹುಟ್ಟಿದೆ? ಅರ್ಥದಿಂದಲೇ ಸಮಸ್ತವೂ ವಶವಾಗುವುದು. ನನಗೆ ಅರ್ಥವಿಲ್ಲ ; ಆದರೂ ಶೋಭನೆಯಲ್ಲಿ ನನ್ನ ವಿಶ್ವಾಸವು ಅತ್ಯಧಿಕವಾಗಿರುವುದು. ಏನುಮಾಡಿದರೂ ಹೋಗುವುದಿಲ್ಲ. ಇದಕ್ಕೇನುಮಾಡಲಿ? ಶೋಭನೆಯು ನನ್ನ ಕೈವಶವಾದಲ್ಲಿ ನಾನು ಇಹಲೋಕದಲ್ಲಿ ಸುಖಿಯಾಗುವೆನು. ನನ್ನಂತಹ ಧನ್ಯನು ಮತ್ತಾವನಿರುವನು ? ಶೋಭನೆಯು ಪರಾಧೀನೆಯಾಗುವುದಾದರೆ, ಅವಳ ಸುಂದರ ಮೂರ್ತಿಯನ್ನು ಸ್ಮರಿಸುತ್ತಾ ಕೊರಗಿ ಕೊರಗಿ ಪ್ರಾಣಬಿಡಬೇಕಾಗುವುದು" ಎಂದು ಧ್ಯಾನಮಾಡುತ್ತಿರುವಾಗ, ನರೇಂದ್ರನಾಥನ ಕಣ್ಣುಗಳು ಮತ್ತಷ್ಟು ಕೆಂಪೇರಿದವು. ಕ್ರಮವಾಗಿ ಕಣ್ಣೀರು ಸುರಿಯಲಾರಂಭವಾಯಿತು. ನರೇಂದ್ರನು ಹೃದಯದ ಆವೇಗವನ್ನು ತಡೆಯಲಾರದೆ ಗಟ್ಟಿಯಾಗಿ "ಶೋಭನೆ! ನೀನು ನನ್ನವಳಾಗಲಾರೆಯಾ! ಹಗಲಿರುಳೂ ನಿನ್ನನ್ನೇ ಧ್ಯಾನಮಾಡಿ ಕೊರಗಿ ಕೊರಗಿ ಕರಗಿ ನೀರಾಗುತಲಿರುವೆನು. ಶೋಭನೆ! ನೀನು ನನ್ನವಳಾಗದಿದ್ದರೆ ನಾನು ನಿನ್ನ ಸುಂದರಮೂರ್ತಿಯನ್ನು ಧ್ಯಾನಮಾಡುತ್ತಾ ಪ್ರಾಣವನ್ನು ಬಿಡಬೇಕಾಗುವುದು." ಎಂದು ಹಂಬಲಿಸಿದನು.

ನರೇಂದ್ರನ ಮಾತನ್ನು ಕೇಳಿ ಶೋಭನೆಯು ತಲೆತಿರುಗಿದವಳಾದಳು. ಅವಳಿಗೇನೂ ತೋರದೆ ಕಲ್ಲಿನಂತೆ ಅಲ್ಲಿಯೇ ನಿಂತುಬಿಟ್ಟಳು. ಈ ಸಂದರ್ಭದಲ್ಲಿ ಏನು ಮಾಡಬೇಕೆಂದು ಅವಳ ಮನಸ್ಸಿಗೆ ತೋರಲಿಲ್ಲ. ಅದು ಕಾರಣವೇ ಅವಳು ಕಲ್ಲಿನ ಪ್ರತಿಮೆಯಂತೆ ನಿಂತಳು. ಕಲ್ಲಿನ ಪ್ರತಿಮೆಯಾದರೋ ನಿರ್ಜೀವ, ಇವಳು ಜೀವವಂತಳು.

ನರೇಂದ್ರನು ತಲೆಯನ್ನು ಬಗ್ಗಿಸಿಕೊಂಡು ಕುಳಿತಿರುವನು. ಚಿಂತೆಯ ಮೇಲೆ ಚಿಂತೆ. ಚಿಂತೆಯು ಪುಂಖಾನುಪುಂಖವಾಗಿ ಬರಲಾರಂಭಮಾಡಿ ನರೇಂದ್ರನನ್ನು ಅಸ್ಥಿರನನ್ನಾಗಿ ಮಾಡಿಬಿಟ್ಟಿತು. ನರೇಂದ್ರನು ಹುಡುಗರ ಹಾಗೆ ಅಳಲಾರಂಭಮಾಡಿದನು. ಆದರೂ ಚಿಂತೆಯು ಹೋಗಲಿಲ್ಲ. ಅವನ ಚಿಂತೆಯು ಇಷ್ಟಕ್ಕೆಲ್ಲಾ ಹೋಗುವ ಹಾಗಿರಲಿಲ್ಲ. ಅವನ ಶರೀರವು ನಡುಗಲಾರಂಭಿಸಿತು. ಕುಳ್ಳಿರಲಾರದೇ ಹೋದನು. ಪದೇ ಪದೇ ಬೆಚ್ಚಿಬೀಳುತಿದ್ದನು. ಯಾರಾದರೂ ನರೇಂದ್ರನನ್ನು ಈ ಅವಸ್ಥೆಯಲ್ಲಿ ನೋಡಿದ್ದರೆ, ನಿಶ್ಚಯವಾಗಿಯೂ ಎದೆಯೊಡೆದು ನಾಮಾವಶಿಷ್ಟರಾಗುತಲಿದ್ದರು. ಬಹು ದಾರುಣವಾದ ಚಿಂತೆ! ಪ್ರತೀಕಾರವಿಲ್ಲದ ಚಿಂತೆ!

ನರೇಂದ್ರನು ಕಂಪಿತಸ್ವರದಿಂದ "ಶೋಭನೆ! ನಾನಿನ್ನು ಬದುಕಲಾರೆನು. ಈ ಮರ್ಮಸ್ಪರ್ಶಿನಿಯಾದ ದುರವಸ್ಥೆಯನ್ನು ನಾನು ಇನ್ನು ಸಹಿಸಲಾರೆನು." ಎಂದು ಹಂಬಲಿಸಿದುದನ್ನು ಶೋಭನೆಯು ನೋಡಿ, ಇನ್ನು ತಡೆಯಲಾರದವಳಾಗಿ ನರೇಂದ್ರನನ್ನು ಕುರಿತು "ನರೇಂದ್ರ! ನೀನೇತಕ್ಕೆ ಸಾಯುವೆ, ನಾನು ನಿನ್ನನ್ನು ಪ್ರೀತಿಸುವುದಿಲ್ಲವೆ?" ಎಂದಳು.

ನರೇಂದ್ರನು ಬೆಚ್ಚಿಬಿದ್ದನು. ಅರಣ್ಯಮಧ್ಯದಲ್ಲಿ ಹಿಂಸ್ರಮೃಗವನ್ನು ನೋಡಿದರೆ ಮನುಷ್ಯನು ಎಷ್ಟು ದಿಗಿಲುಬೀಳುವನೋ ಅಷ್ಟು ಗಾಬರಿಪಟ್ಟವನಾಗಿ ಎದ್ದುನಿಂತನು.

ತಲೆಯೆತ್ತಿ ನೋಡಿದನು. ಅದೇ ಮೂರ್ತಿ ಸ್ಥಿರವಾಗಿರುವುದು, ಗಂಭೀರವಾಗಿರುವುದು. ಆ ಮೂರ್ತಿಯು ಬಾಲಿಕೆಯ ಮೂರ್ತಿಯಲ್ಲ. ಈ ಮೂರ್ತಿಯಲ್ಲಿ ಚಪಲತೆಯಿಲ್ಲ. ಈ ಮೂರ್ತಿಯಲ್ಲಿ ಸ್ಥಿರಪ್ರತಿಜ್ಞಾವ್ಯಂಜಕವಾದ ಭಾವವಿರುವುದು. ಇಂತಹ ಮೂರ್ತಿಯನ್ನು ನರೇಂದ್ರನು ಆದರದಿಂದ ನೋಡಿದನು, ನೋಡಿ ನೋಡಿ ಮುಗ್ಧನಾಗಿ ಹೋದನು.

ಶೋಭನೆಯು ನರೇಂದ್ರನನ್ನು ನೋಡಿ "ನರೇಂದ್ರ! ನೀನು ಇಲ್ಲಿರುವುದನ್ನರಿಯದೆ ಎಲ್ಲೆಲ್ಲಿಯೂ ನಿನ್ನನ್ನು ಹುಡುಕಿದೆನು, ಎಂದಳು.

ನರೇಂದ್ರನು ಕೇವಲ ಅಶ್ರುಪಾತವನ್ನು ಮಾಡುತ್ತಾ ನಿಂತನು. ಶೋಭನೆಯು ಇದನ್ನು ಇನ್ನು ತಾಳಲಾರದೇ ತಾನೂ ಅಳಲಾರಂಭಿಸಿದಳು. ಅನಂತರ ಶೋಭನೆಯು ನರೇಂದ್ರನ ಕೈಯನ್ನು ಹಿಡಿದುಕೊಂಡು "ನೀನೇತಕ್ಕೆ ಅಳುವೆ? ನಿನ್ನ ಕಣ್ಣಿನಲ್ಲಿ ನೀರನ್ನು ನೋಡಿ ನನ್ನ ಹೃದಯವೇ ಒಡೆದುಹೋಗುವಂತಿರುವುದು." ಎಂದಳು.

ಹೀಗೆ ಹೇಳುತ್ತಿರುವಾಗ ಶೋಭನೆಯ ಕಣ್ಣುಗಳಲ್ಲಿ ವಿಪರೀತವಾಗಿ ಜಲ ಪ್ರಳಯವಾಯಿತು. ಶೋಭನೆಯ ಮುಖದಲ್ಲಿ ಮಾತೇ ಇಲ್ಲ. ಇಬ್ಬರೂ ನಿರುತ್ತ ರವಾಗಿ ನಿಂತರು. ಯಾರಿಗೂ ಏನೂ ತೋರದೇ ಹೋಯಿತು.

ನರೇಂದ್ರನು ಆ ಸ್ಥಳವನ್ನು ಬಿಟ್ಟು ಹೋಗಲು ಪ್ರಯತ್ನಿಸಿದನು. ಆದರೆ ಶೋಭನೆಯೇ ಅವನನ್ನು ಹಿಡಿದುಕೊಂಡಳು. ಸುತರಾಂ ಅವನ ಸಂಕಲ್ಪವು ಸಿದ್ಧವಾಗದೇ ಹೋಯಿತು. ನರೇಂದ್ರನು ಅವಳ ದೇವೀಮೂರ್ತಿಯನ್ನು ನೋಡಿದ ಮಾತ್ರದಿಂದಲೇ ಅವನ ಹೃದಯದ ಜ್ವಾಲೆಯು ಅಡಗಿಹೋಯಿತು. ವೇದನೆ ಯಾವುದೂ ಅವನಿಗೆ ಬೋಧೆಯಾಗಲಿಲ್ಲ. ಯಾವ ಶಕ್ತಿಯ ಬಲದಿಂದ ನರೇಂದ್ರನು ಏತಾವತ್ಪರ್ಯಂತ ಸುಮ್ಮನಿದ್ದನೋ, ಆ ಬಲವು ಎಲ್ಲಿಯೋ ತೇಲಿಹೋಯಿತು. ಹೃದಯವು ನೂತನ ಭಾವವನ್ನು ಅವಲಂಬಿಸಿತು. ಶೋಭನೆಯು ನರೇಂದ್ರ ನನ್ನು ಹಿಡಿದುಕೊಂಡು ನಿಂತಿದ್ದುದೂ ಅವನಿಗೆ ಮರೆತುಹೋಯಿತು. ನರೇಂದ್ರನು, ಕಳೆದು ಹೋಗಿದ್ದ ಉಂಗುರವನ್ನು ತಂದುಕೊಡುವ ಕಾಲದಲ್ಲಿ, ಶೋಭನೆಯ ಕೈಯನ್ನು ಹಿಡಿದುಕೊಂಡಿದ್ದಾಗ ಅವನ ಹೃದಯದಲ್ಲಿ ಯಾವ ಭಾವವುಂಟಾ ಗಿದ್ದಿತೋ, ಈಗ ಶೋಭನೆಯು ನರೇಂದ್ರನನ್ನು ಹಿಡಿದುಕೊಂಡಿದ್ದಾಗ ಆ ಭಾವ ವಿರಲಿಲ್ಲ. ಶೋಭನೆಯ ಅಂಗಸ್ಪರ್ಶದಿಂದ ನರೇಂದ್ರನಿಗೆ ಯಾವ ವಿಧವಾದ ಭಾವ ವುಂಟಾಯಿತೋ ಅದನ್ನು ನಾವು ತಿಳಿದು ಹೇಳುವುದಕ್ಕಾಗುವುದಿಲ್ಲ. ಈ ಭಾವವು ಅನುಭವೈಕವೇದ್ಯವಾದುದಾಗಿರುವುದು. ನರೇಂದ್ರನು, ಶೋಭನೆಯ ಕಣ್ಣುಗಳಲ್ಲಿ ನೀರು ತುಂಬಿಕೊಂಡಿರುವುದನ್ನು ನೋಡಿ, ಎಲ್ಲವನ್ನೂ ಮರೆತನು. ತನ್ನ ಪ್ರತಿ ಜ್ಞೆಯು ಮರೆತುಹೋಯಿತು. ತಾನು ಎಲ್ಲಿರುವೆನೆಂಬುದೇ ಮರೆತು ಹೋಯಿತು. ಎಲ್ಲವೂ ಅಂಧಕಾರಮಯವಾಗಿ ಕಂಡು ಬಂದಿತು. ಈ ಸಮಯದಲ್ಲಿ ನರೇಂದ್ರನು ಶೋಭನೆಯನ್ನು ಆಲಿಂಗನೆ ಮಾಡಿಕೊಂಡು,—ಶೋಭನೆ ನೀನೇತಕ್ಕೆ ಅಳುವೆ? ಅಳುವುದು ನನ್ನ ಹಣೆಯಲ್ಲಿ ಬರೆದಿರುವುದು. ನೀನೇತಕ್ಕೆ ಅಳಬೇಕು, ಎಂದನು.

ಶೋಭನೆ—ನೀನೇತಕ್ಕೆ ಅಳುವೆ?

ನರೇಂದ್ರ—(ನಿಟ್ಟುಸಿರು ಬಿಡುತ್ತಾ) ನನ್ನ ಅಳುವಿಗೆ ಕಾರಣ— ಶೋಭನೆ.

ಶೋಭನೆಯು, “ನರೇಂದ್ರ! ಹೇಳು ಹೇಳು, ಏತಕ್ಕೋಸ್ಕರ ನಿನ್ನ ಕಣ್ಣು ಗಳಲ್ಲಿ ಇಷ್ಟು ನೀರು? ನಿನ್ನ ಕಣ್ಣಿನಲ್ಲಿ ನೀರು ತುಂಬಿರುವುದನ್ನು ನೋಡಿ, ನನ್ನ ತಲೆಯ ಮೇಲೆ ಅಂತರಿಕ್ಷವೇ ಕಳಚಿಬಿದ್ದಂತಾಗಿರುವುದು, ಎಂದಳು.

ನರೇಂದ್ರನು, ನನ್ನ ವ್ಯಸನಕ್ಕೆ ಕಾರಣವುಂಟು, ಅನಂತರ ಗೊತ್ತಾಗುವುದು. ಆದರೆ ನೀನು ಏತಕ್ಕೆ ಅಳುವೆ? ತಿಳಿಸು. ಎಂದು ಕೇಳಿದನು.

ಶೋಭನೆಯ ಮೈಯೆಲ್ಲಾ ನಡುಗಲಾರಂಭಿಸಿತು. ನರೇಂದ್ರನ ಪ್ರಶ್ನೆಗೆ ಉತ್ತರವನ್ನು ಕೊಡಲು ಇಷ್ಟವುಂಟಾದರೂ ಉತ್ತರಕೊಡಲಾರದವಳಾದಳು. ಅವಳ ಬಾಯಲ್ಲಿ ಮಾತೇ ಹೊರಡದು. ದೂರ ದೇಶಯಾತ್ರೆಗೆ ಹೊರಡಲು ಸಿದ್ಧನಾದ ವಲ್ಲಭನು, ತನ್ನ ಹೆಂಡಿತಿಯ ಸಮೀಪಕ್ಕೆ ಬಂದು, ಹೊರಡಲು ಸಮ್ಮತಿಯನ್ನು ಕೇಳುವುದಾದರೆ, ಹೆಂಡಿತಿಯ ಬಾಯಿಂದ ಹೇಗೆ ಮಾತೇ ಹೊರಡದೋ, ಹೊಸದಾಗಿ ವಿವಾಹಿತೆಯಾದ ಬಾಲೆಗೆ ತನ್ನ ಪತಿಯೊಡನೆ ಪ್ರಥಮಸಂಭಾಷಣೆಯಲ್ಲಿ ಹೇಗೆ ಮಾತೇ ಹೊರಡದೋ, ಮಾನವತಿಯಾದ ನಾಯಿಕೆಯ ಹತ್ತಿರ, ನಾಯಕನು "ಸ್ಮರಗರಲಖಂಡನಂ, ಮಮ ಶಿರಸಿ ಮಂಡನಂ, ದೇಹಿ ಪದಪಲ್ಲವಮುದಾರಂ" ಎಂದು ಹೇಳಿ ಅಂಗಲಾಚಿಕೊಳ್ಳುತ್ತಿರುವಾಗ ನಾಚಿಕೆಯಿಂದ ಬಾಯಲ್ಲಿ ಹೇಗೆ, ಮಾತೇ ಹೊರಡದೋ, ಹಾಗೆಯೇ ಶೋಭನೆಯ ಬಾಯಲ್ಲಿಯೂ ಒಂದು ಮಾತಾದರೂ ಹೊರಡದೇಹೋಯಿತು. ನರೇಂದ್ರನು ಇದನ್ನು ನೋಡಿದನು. ಶೋಭನೆಯು ಅಳುತ್ತಾ, ನರೇಂದ್ರನನ್ನು ನೋಡುತಿದ್ದಳು. ನಾಲ್ಕು ಕಣ್ಣುಗಳೂ ಸ್ವಲ್ಪಕಾಲ ಸಂಮಿಳಿತವಾಗಿಯೇ ಇದ್ದುವು. ಪರಸ್ಪರ ಪ್ರಶ್ನೆಗೆ ಕಣ್ಣುಗಳು ಎಂತಹ ಅನಿರ್ವಚನೀಯವಾದ ಉತ್ತರವನ್ನು ಹೇಳುತಿದ್ದುವೊ, ಅದನ್ನು ಲೇಖನಿಯಿಂದ ವಿವರಿಸಲು ನಮಗೆ ಸಾಧ್ಯವಿಲ್ಲ.

ಸ್ವಲ್ಪಹೊತ್ತು ಇಬ್ಬರೂ ನಿರ್ವಾಕ್ಕಾಗಿದ್ದರು. ಅನಂತರ ಶೋಭನೆಯು ನರೇಂದ್ರನನ್ನು ಕುರಿತು—ನಾನು ನಿನ್ನನ್ನು ಎಷ್ಟು ವಿಧವಾಗಿ ಪ್ರೀತಿಸಿದರೂ ನೀನು ನನ್ನಮೇಲೆ ಕೋಪಮಾಡುವಿಯೇಕೆ? ಎಂದಳು.

ನರೇಂದ್ರನಾಥನು, ಇನ್ನು ಸುಮ್ಮನಿರಲಾರದೇ ಶೋಭನೆಯನ್ನು ನೋಡಿ—ಶೋಭನೆ! ಯಾರಿಗೋಸ್ಕರವಾಗಿ ನನ್ನ ಈ ಜೀವನ, ಮನಸ್ಸು, ಶರೀರ ಎಲ್ಲವನ್ನೂ ಅರ್ಪಣಮಾಡಿದ್ದೆನೊ, ಆ ಪದಾರ್ಥವು ಕೈವಶವಾಗದ ಪಕ್ಷದಲ್ಲಿ, ಅಳುವುದಲ್ಲದೆ ಮತ್ತೇನು ಮಾಡಬೇಕು? ಎಂದು ಕೇಳಿದನು.

ಶೋಭನೆ—ಹೊಂದುವುದಿಲ್ಲವೇಕೆ? ಹೊಂದದೇ ಇರಲು ಅಡ್ಡಿಯೇನಿರುವುದು? ನೀನೇತಕ್ಕೆ ಇಷ್ಟು ಅಸ್ಥಿರನಾಗಿರುವೆ?

ನರೇಂದ್ರ—ಶೋಭನೆ! ನೀನು ಇನ್ನೂ ಹುಡುಗಿ. ನನ್ನ ಮನೋಭಿಪ್ರಾಯವನ್ನು ತಿಳಿಯಲು ನಿನಗೆ ಇನ್ನೂ ಶಕ್ತಿಸಾಲದು. ವೃಥಾ ನನ್ನ ವ್ಯಸನವನ್ನು ನಿನಗೆ ತಿಳಿಸಿ ನಿನಗೆ ನಾನು ದುಃಖವನ್ನುಂಟುಮಾಡಬೇಕೇಕೆ?

ಶೋಭನೆ—ನಾನು ನಿನ್ನನ್ನು ಬಹಳವಾಗಿ ಪ್ರೀತಿಸುತ್ತಿರುವಾಗ, ಇಂತಹ ಮಾತುಗಳು ನಿನ್ನ ಬಾಯಲ್ಲಿ ಬರಬಾರದು. ನಿನ್ನ ಕಷ್ಟವನ್ನು ನೋಡಿ ನನ್ನ ಹೃದಯದಲ್ಲಿ ಅತ್ಯಂತ ವ್ಯಸನವಾದುದರಿಂದ ನಿನ್ನನ್ನು ಕೇಳಿದೆನು. ಈ ಸಂದರ್ಭದಲ್ಲಿ ನನ್ನಿಂದ ಏನಾದರೂ ನಿನಗೆ ಉಪಕಾರವಾಗಬೇಕಾಗಿದ್ದರೆ, ತಿಳಿಸು. ನಾನು ಹೇಗಾದರೂ ಮಾಡಿ ಅದನ್ನು ನೆರವೇರಿಸಿಕೊಡುವೆನು.

ನರೇಂದ್ರನು ಶೋಭನೆಯ ಹೃದಯವನ್ನು ಅರಿತನು. ಶೋಭನೆಯ ಮುಖವು ಹಿಮದಿಂದ ನನೆದ ಕಮಲಿನಿಯಂತೆ ಮಲಿನವಾಗಿ ಹೋಗಿದ್ದಿತು. ಕಣ್ಣು ಗಳೆರಡೂ ಕೆಂಪೇರಿಹೋಗಿದ್ದುವು. ಕೆಂಪೇರಿದ ಕಣ್ಣುಗಳಿಂದ ಒಂದಾಗುತೆ ಬಂದ ಅಶ್ರುಬಿಂದುವು ವಕ್ಷದ ಮೇಲೆ ಬಿದ್ದು ಉರುಳಿಹೋಗುತಿದ್ದಿತು. ಇದನ್ನು ನೋಡಿ ನರೇಂದ್ರನ ಹೃದಯವು ಒಡೆದುಹೋಯಿತು. ಇನ್ನು ತಾಳಲಾರದೆ, ಶೋಭನೆಯ ವಿವಾಹದ ವಿಷಯವಾಗಿ ಬೇರೆ ಆಲೋಚನೆ ನಡೆಯುತಲಿರುವುದನ್ನು ನರೇಂದ್ರನು ಆದ್ಯೋಪಾಂತವಾಗಿ ಶೋಭನೆಗೆ ತಿಳಿಸಿದನು.

ಶೋಭನೆಯು, ತನ್ನ ಸೆರಗಿನಿಂದ ಕಣ್ಣೀರನ್ನೊರಸಿಕೊಂಡು—ನರೇಂದ್ರ! ಹೃದಯವನ್ನು ಒಂದುಬಾರಿ ಮನಃಪೂರ್ತಿಯಾಗಿ ಯಾರ ಚರಣದಲ್ಲಿ ಅರ್ಪಣೆ ಮಾಡಿರುವೆನೊ, ಅವನನ್ನು ಬಿಟ್ಟು ಮತ್ತಾವನು ತಾನೇ ಈ ಹೃದಯಕ್ಕೆ ಅಧಿ ಕಾರಿಯಾದಾನು, ಎಂದಳು.

ಶೋಭನೆಯ ಮಾತನ್ನು ಕೇಳಿ ನರೇಂದ್ರನು ಸ್ವಲ್ಪ ನಕ್ಕು—ಶೋಭನೆ! ನೀನು ಇನ್ನೂ ಹುಡುಗಿ, ನಿನ್ನ ಇಷ್ಟದಂತೆ ಕಾರ್ಯಗಳು ನಡೆಯಲು ಸುಲಭವಲ್ಲ. ನಿನಗೆ ತಂದೆತಾಯ್ಗಳಿರುವರು. ಅವರು ಯಾವುದನ್ನು ಒಳ್ಳೆಯದೆಂದು ಆಲೋಚಿ ಸುವರೋ ಅದನ್ನು ಮಾಡಲುಳ್ಳವರು. ನಾನಾದರೋ ದರಿದ್ರನು. ನನ್ನೊಡನೆ ನಿನ್ನ ವಿವಾಹವಾಗುವುದೆಂದರೇನು? ಎಂದು ಕೇಳಿದನು.

ಶೋಭನೆ—ನಾನು ಅಪಾತ್ರದಲ್ಲಿ ನನ್ನ ಹೃದಯವನ್ನು ಅರ್ಪಣೆ ಮಾಡಿಲ್ಲ. ಧರ್ಮದಲ್ಲಿರುವ ಪಕ್ಷದಲ್ಲಿ, ಒಬ್ಬನಲ್ಲಿ ಒಂದಾವೃತ್ತಿ ಅರ್ಪಣೆ ಮಾಡಿದ ಮೇಲೆ ಮತ್ತೊಬ್ಬನಲ್ಲಿ ಹೃದಯವು ಅರ್ಪಿತವಾಗಲಾರದು.

ಶೋಭನೆಯ ಮಾತನ್ನು ಕೇಳಿ ನರೇಂದ್ರನ ಹೃದಯವು ಕರಗಿ ನೀರಾಗಿ ಹೋಯಿತು. ಅವನು ಶೋಭನೆಯನ್ನು ಆಲಿಂಗನೆ ಮಾಡಿಕೊಂಡು ಅವಳ ಮುಖ ವನ್ನು ಚುಂಬನಮಾಡಿದನು.

ಈ ಸಮಯದಲ್ಲಿ ಸಾವಿತ್ರಿಯು ಏನೋ ಕಾರ್ಯಕ್ಕೋಸುಗ ಇವರಿಬ್ಬರೂ ಇದ್ದ ಮಹಡಿಯ ಮೇಲೆ ಹತ್ತಿ ಬಂದಳು. ಆಗ ಶೋಭನೆಯು ನರೇಂದ್ರನಾಥನ ಬಾಹುಪಂಜರದಲ್ಲಿ ಬದ್ಧೆಯಾಗಿದ್ದಳು.

ದೂರದಲ್ಲಿ ಕಾಲಿನ ಶಬ್ದವನ್ನು ಕೇಳಿ ನರೇಂದ್ರನು ಶೋಭನೆಯನ್ನು ಬಿಟ್ಟುಬಿಟ್ಟನು. ಶೋಭನೆಯಾದರೋ ಅಲ್ಲಿಯೇ ನಿಂತಿದ್ದಳು. ನರೇಂದ್ರನು ಮೆಲ್ಲಮೆಲ್ಲನೆ ಮೆಟ್ಟಿಲನ್ನು ಇಳಿದು ಕೆಳಗೆ ಬಂದುಬಿಟ್ಟನು. ಒಡನೆಯೇ ಸಾವಿತ್ರಿಯೂ ಕೆಳಗೆ ಇಳಿದು ಬಂದುಬಿಟ್ಟಳು.

ನರೇಂದ್ರನಾಥನು ಕೆಳಗೆ ಇಳಿದು ಹೋದನು. ಆದರೆ ಶೋಭನೆಯು ಅಲ್ಲಿಯೇ ನಿಂತಿದ್ದಳು. ನಿಂತಿದ್ದ ಹಾಗೆಯೇ ಶೋಭನೆಯು, ತನ್ನ ಮನದಲ್ಲಿ "ನರೇಂದ್ರನು ನನ್ನವನಲ್ಲವೆ? ಅಥವಾ ಪುರುಷರ ಹೃದಯವು ಸ್ತ್ರೀಯರ ಹೃದಯಕ್ಕಿಂತಲೂ ಅತಿ ಕಠಿಣವು. ಸ್ತ್ರೀಯರು ಪುರುಷರ ವಿಷಯದಲ್ಲಿ ಬಹಳವಾಗಿ ಕೊರಗುವರು. ಆದರೆ ಪುರುಷರು ಮಾತ್ರ ಹಾಗಲ್ಲವು. ಇಲ್ಲದಿದ್ದರೆ ನರೇಂದ್ರನು ಹೀಗೆ ನನ್ನನ್ನು ಏಕಾಂಗಿಯಾಗಿ ಬಿಟ್ಟು ಹೊರಟುಹೋಗುತಿದ್ದನೆ?" ಎಂದು ಆಲೋಚಿಸಲಾರಂಭಿಸಿದಳು. ಅಷ್ಟರಲ್ಲಿ ಅವಳಿದ್ದಲ್ಲಿಗೆ ಯಾರೋ ಬಂದರು. ಆಗಂತುಕನ ವಯಸ್ಸು ೪೦ ಇದ್ದಿರಬಹುದು. ಅವನ ಸರ್ವಾಂಗದಲ್ಲಿನ ಯೌವನ ಪರಿಪಾಟಿಯನ್ನು ನೋಡಿದರೆ ೨೪ ವರುಷಕ್ಕಿಂತ ಅಧಿಕವಾಗಿದ್ದಿತೆಂದು ಹೇಳುವುದಕ್ಕೆ ಆಗುತ್ತಿರಲಿಲ್ಲ. ಆಗಂತುಕನು ಶೋಭನೆಯನ್ನು ನೋಡಿ,—ಶೋಭನೆ! ನೀನು ಇಲ್ಲಿರುವೆಯಾ, ನಿನ್ನನ್ನು ನೋಡಲೋಸುಗವೇ ನಾನು ಎಲ್ಲೆಲ್ಲೋ ಹುಡುಕಿದೆನು. ಶೋಭನೆ! ಇದೇನು ಕಣ್ಣಾತುಂಬಾ ನೀರು, ನೀನು ಅಳುತ್ತಿದ್ದಂತಿರುವುದು. ನಿನಗೀಗ ಏನು ತಾನೇ ಕಷ್ಟ ಸಂಭವಿಸಿದೆ? ಎಂದು ಕೇಳಿದನು.

ಶೋಭನೆ—ಇಲ್ಲ ಮಾವಾ! ನಾನು ಅಳಲಿಲ್ಲ. ನನ್ನ ಕಣ್ಣುಗಳಲ್ಲಿ ಏನೋ ಬಿದ್ದಿತು. ಅದಕ್ಕೋಸ್ಕರ ಕಣ್ಣುಗಳೆರಡೂ ಕೆಂಪೇರಿ ನೀರು ತುಂಬಿಕೊಂಡಿತು. ನಾನು ಅಳುವಷ್ಟು ವ್ಯಸನ ತಾನೇ ಏನಿದೆ? ಮಾವಾ! ನೀನು ಯಾವಾಗ ಬಂದೆ? ನೀನು ಆರೋಗ್ಯವಾಗಿರುವೆಯಷ್ಟೆ?

ಆಗಂತುಕನ ಹೆಸರು ಚಂದ್ರನಾಥ. ಚಂದ್ರನಾಥನು ಜಾತಿಯಲ್ಲಿ ಕಾಯಸ್ಥನು. ಚಂದ್ರನಾಥನು ಶೋಭನೆಯನ್ನು ಬಹಳವಾಗಿ ಪ್ರೀತಿಸುತಲಿದ್ದನು. ಅವನು ಮೊದಲು ರಮೇಶಬಾಬುವಿನ ಮನೆಯಲ್ಲಿ ಕೆಲಸಕ್ಕೆ ಇದ್ದನು. ಅದು ಕಾರಣ ಈಗಲೂ ಆಗಾಗ ರಮೇಶನ ಮನೆಗೆ ಬಂದು ಹೋಗುತಿದ್ದನು.

ಶೋಭನೆಯ ತಾಯಿಯು ಸಾಯುವುದಕ್ಕೆ ಮೊದಲೇ, ಚಂದ್ರನಾಥನು ರಮೇಶನ ಮನೆಯನ್ನು ಬಿಟ್ಟುಬಿಟ್ಟಿದ್ದನು. ಆದರೂ ಶೋಭನೆಯಲ್ಲಿ ಬಹಳ ವಿಶ್ವಾಸವಿದ್ದುದರಿಂದ, ಅವಳನ್ನು ನೋಡುವ ನಿಮಿತ್ತ ಆಗಾಗ ರಮೇಶನ ಮನೆಗೆ ಬರುತ್ತಿದ್ದನು. ಆಗಾಗ ರಮೇಶನ ಅಪ್ಪಣೆಯನ್ನು ಪಡೆದು ಶೋಭನೆಯನ್ನು ತನ್ನ ಮನೆಗೂ ಕರೆದುಕೊಂಡು ಹೋಗುತ್ತಿದ್ದನು.

ಚಂದ್ರನಾಥನು ಶೋಭನೆಯನ್ನು ನೋಡಿದ ನಂತರ ಅವಳೊಡನೆ ವಿಧವಿಧವಾದ ಮಾತುಗಳನ್ನಾಡಿ, ಕಡೆಗೆ ಅವಳನ್ನು ಸಂಗಡ ಕರೆದುಕೊಂಡು ಮಹಡಿಯಿಂದ ಕೆಳಕ್ಕೆ ಬಂದನು.

ನರೇಂದ್ರನಾಥನು, ಕೆಳಗಿಳಿದು ಬಂದವನು ರಮೇಶನ ಕೋಣೆಗೆ ಹೋಗಿ ಕುಳಿತುಕೊಂಡನು. ಸ್ವಲ್ಪ ಹೊತ್ತಿನಲ್ಲಿಯೇ ಒಬ್ಬ ಭೃತ್ಯನು ಬಂದು, ಯಾರೋ ನರೇಂದ್ರನನ್ನು ನೋಡಲು ಬಂದಿರುವರೆಂದು ಹೇಳಿ ಹೊರಟು ಹೋದನು. ಅನಂತರ ನರೇಂದ್ರನು ಆಗಂತುಕನನ್ನು ನೋಡಿ ಅವನಿಂದ ತನ್ನ ತಾಯಿಗೆ ದೇಹದಲ್ಲಿ ಸ್ವಸ್ಥತೆಯಿಲ್ಲವೆಂದು ತಿಳಿದು ತತ್‌ಕ್ಷಣವೇ ತನ್ನ ಬಟ್ಟೆ ಬರೆ ಮುಂತಾದುವುಗಳನ್ನು ತೆಗೆದುಕೊಂಡು ಜಾಗ್ರತೆಯಾಗಿ ಮನೆಗೆ ಹೊರಟು ಹೋದನು.

ನರೇಂದ್ರನು ಯಾರೊಡನೆಯೂ ಏನನ್ನೂ ಮಾತನಾಡದೆ ತನ್ನ ಮನೆಗೆ ಹೊರಟುಹೋದುದನ್ನು ರಮೇಶನೂ ಸಾವಿತ್ರಿಯೂ ನೋಡಿದರು. ಶೋಭನೆಯೂ ನೋಡಿದಳು.

ರಮೇಶನು ಈ ವರ್ತಮಾನವನ್ನು ಕೇಳಿ ಬಹಳವಾಗಿ ವ್ಯಸನಪಟ್ಟನು ಸಾವಿತ್ರಿಯೂ ಈ ವರ್ತಮಾನವನ್ನು ಕೇಳಿ ವ್ಯಸನಪಡುತ್ತಿರುವಾಗ, ರಮೇಶನು ಶೋಭನೆಯನ್ನು ಕರೆದನು. ಶೋಭನೆಯ ಮುಖವು ಆಗ ಅಶೋಕಪುಷ್ಪಗಳ ಗೊಂಚಲಂತೆ ಕೆಂಪು ಬಣ್ಣವನ್ನು ಧಾರಣಮಾಡಿದ್ದಿತು. ರಮೇಶನು ಅದನ್ನು ನೋಡಿ, ಶೋಭನೆಯೂ ನರೇಂದ್ರನ ವಿಷಯದಲ್ಲಿ ಕೇವಲ ವ್ಯಸ್ತಳಾಗಿರಬೇಕೆಂದು ತಿಳಿದುಕೊಂಡನು. ಅನಂತರ ಶೋಭನೆಯನ್ನು ಕುರಿತು,—ಶೋಭನೆ! ಕೇಶವನನ್ನು ಕರೆ, ಬಂದೀಪುರಕ್ಕೆ ಅವನು ಹೋಗಬೇಕಾಗಿರುವುದು, ಎಂದನು.

ಕೇಶವನು, ರಮೇಶಬಾಬುವಿನ ಪುರಾತನ ಸೇವಕನು. ಅವನು ರಮೇಶನ ಬಂಧುಬಾಂಧವರೆಲ್ಲರನ್ನೂ ಚೆನ್ನಾಗಿ ಅರಿತವನಾಗಿದ್ದನು. ಸ್ವಲ್ಪಹೊತ್ತಿನ ಮೇಲೆ ಕೇಶವನು ಬಂದು ಸಾವಿತ್ರಿಯನ್ನು ನೋಡಿ "ಏನು?" ಎಂದನು.

ಸಾವಿತ್ರಿ—ನೀನು ಈಗ ಬಂದೀಪುರಕ್ಕೆ ಹೋಗಬೇಕಾಗಿರುವುದು.

ಕೇಶವ—ಮಾವನ ಮನೆಗೆ?

ಸಾವಿತ್ರಿ—ಇಲ್ಲ. ನನ್ನ ಬಾಲ್ಯ ಸ್ನೇಹಿತಳ ಮನೆಗೆ.

ಕೇಶವನು ಸ್ವಲ್ಪಹೊತ್ತು ಆಲೋಚಿಸಿ " ಆಗಲಿ " ಎಂದನು.

ಹೀಗೆ ಹೇಳಿ ಕೇಶವನು ಮನೆಯಿಂದ ಹೊರಟನು. ಸಾವಿತ್ರಿಯೂ ಹೊರಟಳು.

ಶೋಭನೆಯು, " ಕೇಶವನು ಬಂದೀಪುರಕ್ಕೆ ಹೋಗುವನು. ಅಲ್ಲಿಗೊಂದು ಕಾಗದ ಬರೆದು ಕೊಡಲೇ ?" ಎಂದು ಆಲೋಚಿಸಿದಳು. ಸ್ವಲ್ಪಹೊತ್ತು ಚಿಂತಿಸಿ ಸುಮ್ಮನಾದಳು. ಮತ್ತೆ ಬರೆಯುವುದಾಗಿ ನಿರ್ಧರ ಮಾಡಿದಳು. ಒಂದು ವೇಳೆ ತನ್ನನ್ನು ಚಂಚಲೆಯಾದ ಹುಡುಗಿ ಎಂದು ತಿಳಿದು ನನಗೆ ಅವನು ಉತ್ತರ ಬರೆಯದೇ ಹೋದರೆ, ನಾನು ಮಾಡುವುದೇನೆಂದು ಕಾಗದ ಬರೆಯುವುದನ್ನು ಬಿಟ್ಟಳು. ಹೀಗೆಯೇ ಅನೇಕಾನೇಕ ತರ್ಕವಿತರ್ಕಗಳನ್ನು ಮಾಡಿ ಕೊನೆಗೆ ಕಾಗದ ಬರೆಯುವುದೇ ಸರಿಯೆಂದು ನಿರ್ಧರಮಾಡಿ ತನ್ನ ಕೊಠಡಿಯೊಳಗೆ ಹೋಗಿ ಬರೆಯುವುದಕ್ಕೆ ಕುಳಿತಳು.

---

## ಏಳನೆಯ ಪರಿಚ್ಛೇದ

ಶೋಭನೆಯು ಬರೆಯುವ ಸಾಮುಗ್ರಿಗಳನ್ನು ಹವಣಿಸಿಕೊಂಡು ಬರೆಯಲು ಕುಳಿತುಕೊಂಡಳು. ಬರೆದು ಬರೆದು ೨—೩ ಕಾಗದಗಳನ್ನು ಹಾಳಮಾಡಿದಳು. ಆದರೂ ಸರಿಯಾಗಿ ಒಂದು ಕಾಗದವನ್ನೂ ಬರೆದು ಮುಗಿಸಲಿಲ್ಲ. ಕಾಗದವನ್ನು ಚೂರು ಚೂರಾಗಿ ಹರಿದು ಹಾಕಿಬಿಟ್ಟಳು. ಮತ್ತೊಂದು ಕಾಗದವನ್ನು ತೆಗೆದು ಕೊಂಡು ಬರೆದಳು. ಅದೂ ಸರಿಹೋಗದಿರಲು, ಅದನ್ನೂ ಹರಿದುಹಾಕಿಬಿಟ್ಟಳು. ಕಾಗದವನ್ನು ಹೇಗೆ ಪ್ರಾರಂಭಮಾಡಬೇಕೆಂದು ಅವಳಿಗೆ ತಿಳಿಯದೇ ಇಷ್ಟು ಆಲೋಚನೆಗೆ ಕಾರಣವಾಯಿತು. ಮತ್ತೆ ಮತ್ತೊಂದು ಕಾಗದವನ್ನು ತೆಗೆದು ಕೊಂಡು ಅದರಲ್ಲಿ " ಪ್ರಾಣೇಶ್ವರ ! ಪ್ರಾಣೇಶ್ವರ " ಎಂದು ಬರೆದು ಆ ಕಾಗದವನ್ನೂ ಹರಿದು ಬಿಸಾಟಳು. ಈ ಸಂಭ್ರಮದಲ್ಲಿ ಕೇಶವನು ಸಾವಿತ್ರಿಯ ಹತ್ತಿರದಿಂದ ಹೊರಡಲು ಸಿದ್ಧನಾದನು. ಶೋಭನೆಗೆ ಇದು ಗೊತ್ತಾಯಿತು. ಅವಳು ಕೇಶವನಿಗೆ ಕೆಲವು ಸಂಗತಿಗಳನ್ನು ಹೇಳಬೇಕೆಂದು ಹೊರಟಳು. ಆ ಸಮಯದಲ್ಲಿ ಸಾವಿತ್ರಿಯು ಅಲ್ಲಿಯೇ ಇದ್ದುದರಿಂದ ಶೋಭನೆಯು ಸುಮ್ಮನಾಗಿಬಿಟ್ಟಳು.

ಸಾವಿತ್ರಿಯು ಕಣ್ಣಿಗೆ ಮರೆಯಾದ ಮೇಲೆ, ಕೇಶವನಿಗೆ ಕೆಲವಂಶಗಳನ್ನು ತಿಳಿಸುವ ನಿಮಿತ್ತ ಶೋಭನೆಯು ಅಲ್ಲಿಯೇ ನಿಂತಳು. ಸ್ವಲ್ಪ ಹೊತ್ತಾದ ಮೇಲೆ ಶೋಭನೆಯು ಕೇಶವನ ಹಿಂದೆ ಹಿಂದೆಯೇ ಸಾವಿತ್ರಿಗೆ ಕಾಣಿಸದಂತೆ ಹೋದಳು. ಆಗ ಸಾವಿತ್ರಿಯು, ಯಾವ ಕೊಠಡಿಯಲ್ಲಿ ಶೋಭನೆಯು ಕುಳಿತು ನರೇಂದ್ರನಿಗೆ ಕಾಗದ ಬರೆಯುತಲಿದ್ದಳೋ, ಅಲ್ಲಿಗೆ ಹೋದಳು. ಅಲ್ಲಿ ಅನೇಕಾನೇಕ ಕಾಗದದ ಚೂರುಗಳು ಬಿದ್ದಿದ್ದುವು. ಇವುಗಳೇನಿರಬಹುದೆಂದು ಕುತೂಹಲದಿಂದ ಸಾವಿತ್ರಿಯು ಅವುಗಳನ್ನು ತೆಗೆದು ನೋಡಿದಳು. ಅದರಲ್ಲಿ ಶೋಭನೆಯ ಕೈಬರೆಹವಿದ್ದಿತು. ಕಾಗದದಲ್ಲಿನ ವಿಷಯವನ್ನು ನೋಡಲು ಸಾವಿತ್ರಿಯು ಮತ್ತಷ್ಟು ಆತುರಳಾದಳು. ಕೆಲವು ಕಾಗದದ ಚೂರಿನಲ್ಲಿ "ನರೇಂದ್ರನಾಥ" ಎಂದು ಬರೆದಿದ್ದಿತು. ಕೆಲವುದರಲ್ಲಿ "ಪ್ರಿಯ ನರೇಂದ್ರನೆ" ಎಂದು ಇತ್ತು. ಮತ್ತೆ ಕೆಲವಲ್ಲಿ "ಪ್ರಾಣಕಾಂತನಾದ ನರೇಂದ್ರ" ಎಂದು ಅಸ್ಪಷ್ಟವಾಗಿ ಬರೆದಿದ್ದಿತು. ಸಾವಿತ್ರಿಯು ಇದೆಲ್ಲವನ್ನೂ ನೋಡಿ, 'ಶೋಭನೆಯು ನರೇಂದ್ರನಾಥನಿಗೆ ಕಾಗದ ಬರೆಯುತ್ತಿದ್ದಿರಬಹುದು ; ಅಷ್ಟರೊಳಗೆ ಕೇಶವನೂ ಹೊರಟು ಹೋದನಾದ ಕಾರಣ ಕಾಗದವು ಪೂರ್ತಿಯಾಗದಿರುವುದನ್ನು ಕಂಡು ಶೋಭನೆಯು ಕಾಗದವನ್ನು ಹರಿದುಹಾಕಿರಬಹುದು ;' ಎಂದು ಆಲೋಚಿಸಿದಳು. ಶೋಭನೆಯು ತನ್ನ ಕೊಠಡಿಯಲ್ಲಿ ಇಲ್ಲದಿರುವುದನ್ನು ಕಂಡು ಸಾವಿತ್ರಿಯು, ಅವಳು ಕೇಶವನ ಹಿಂದೆ ಹೋಗಿರಬಹುದೆಂದು ತಿಳಿದು ಕೂಡಲೆ ಆ ಕೊಠಡಿಯನ್ನು ಬಿಟ್ಟು ಕೇಶವನು ಹೊರಟುಹೋದನೋ ಇಲ್ಲವೋ ತಿಳಿಯಬೇಕೆಂದು ಯತ್ನಮಾಡಿದಳು. ಹಾಗೆಯೇ ಶೋಭನೆಯು ಎಲ್ಲಿರುವಳೆಂದು ಹುಡುಕಿದಳು. ಕೇಶವನು ಇನ್ನೂ ಹೊರಟುಹೋಗದಿದ್ದರೆ, 'ಅವನನ್ನು ಇಲ್ಲಿಯೇ ಕೆಲವು ಕಾಲವಿರುವಂತೆ ಹೇಳಬೇಕು. ಅಷ್ಟರೊಳಗೆ ಶೋಭನೆಯು ತನ್ನ ಕಾಗದವನ್ನು ಪೂರೈಸಿ ಅವನಿಗೆ ಕೊಡುವಳು,' ಎಂದು ಭಾವಿಸಿ ಸಾವಿತ್ರಿಯು ಕೇಶವನನ್ನು ಹುಡುಕಲು ಹೊರಟಳು. ಸಾವಿತ್ರಿಯು ಶೋಭನೆಯನ್ನು ತನ್ನ ಮಗಳಿಗಿಂತಲೂ ಅಧಿಕವಾಗಿ ಪ್ರೀತಿಸುತಲಿದ್ದಳು. ಶೋಭನೆಗೆ ಯಾವ ತೆರನಾಗಿಯೂ ಕಷ್ಟಬಾರದಂತೆ ನೋಡಿಕೊಳ್ಳುತಿದ್ದಳು. ಶೋಭನೆಯ ವ್ಯಸನವೇ ತನ್ನ ವ್ಯಸನವೆಂದು ತಿಳಿದು ಹಗಲಿರುಳೂ ಶೋಭನೆಗೆ ಬೇಕಾದುದನ್ನೆಲ್ಲ ಹವಣಿಸಿ ಕೊಡುವುದರಲ್ಲಿ ಸಾವಿತ್ರಿಯು ಸ್ವಲ್ಪವೂ ಹಿಂಜರಿಯುತಲಿರಲಿಲ್ಲ.

ಸಾವಿತ್ರಿಯ ಹಾಗೂ ಶೋಭನೆಯ ಆಸೆಯು ನೆರವೇರಲಿಲ್ಲ. ಅಷ್ಟರೊಳಗೆ ಕೇಶವನು ಹೊರಟುಹೋಗಿದ್ದನು. ಸಾವಿತ್ರಿಯ ಆಸೆಯು ಸುತರಾಂ ನೆರವೇರಲಿಲ್ಲ.

ಶೋಭನೆ! ನಿನ್ನ ಆಸೆ ಹೇಗೆ ತಾನೆ ನೆರವೇರೀತು! ಹಾಳು ನಾಚಿಕೆಯು ನಿನ್ನ ಮುಖದಲ್ಲಿ ಇದ್ದು, ನೀನು ಏತಕ್ಕೋಸ್ಕರ ಕೇಶವನನ್ನು ಹಿಂಬಾಲಿಸಿ ಹೋದೆ

ಯೋ ಅದನ್ನು ನೆರವೇರಿಸದೇ ಅಡ್ಡಿಮಾಡಿತು. ಶೋಭನೆ! ನಿನ್ನ ಆಸೆಯು ಭಗ್ನ ವಾಗಿ ಹೋಯಿತು.

ಮನೋರಥವು ನೆರವೇರದಿರುವುದನ್ನು ಕಂಡು, ಶೋಭನೆಯು ತನ್ನ ಕೊಠಡಿ ಯೊಳಗೆ ಬಂದು ಬರವಣಿಗೆಯ ಸಾಮಗ್ರಿಯನ್ನು ದೂರವಿಟ್ಟು ಕುಳಿತುಕೊಂಡಳು. ಲೇಖಣಿಯನ್ನು ಮುರಿದುಹಾಕಿ ಕಾಗದವನ್ನು ಒಂದೊಂದನ್ನಾಗಿ ಅಗ್ನಿದೇವರಿಗೆ ಆಹುತಿಯಾಗಿ ಮಾಡತೊಡಗಿದಳು. ನರೇಂದ್ರನ ಹೆಸರು ಬರೆದಿರುವ ಕಾಗದ ವನ್ನು ಸುಡುವುದು ಉಚಿತವಲ್ಲವೆಂದು ಭಾವಿಸಿ ಕಾಗದಗಳನ್ನು ಒಂದು ಗುಪ್ತ ವಾದ ಸ್ಥಳದಲ್ಲಿ ಇಟ್ಟು ತನ್ನ ಹಾಸಿಗೆಯ ಮೇಲೆ ಬಂದು ಮಲಗಿದಳು.

ಚಿಂತೆಯು ಯಾರ ಹೃದಯವನ್ನು ಆವರಿಸುವುದೋ, ಅವರಿಗೆ ಸುಖವೆಲ್ಲಿ ಯದು? ಚಿಂತೆಯು ಮೃತ್ಯುವಿಗಿಂತಲೂ ಬಲವತೀ. ಒಂದು ಕ್ಷಣಕಾಲ ಚಿಂತೆಯು ಹೃದಯದಲ್ಲಿ ಪದಾರ್ಪಣಮಾಡಿದರೆ, ಮನುಷ್ಯನನ್ನು ದಗ್ಧಮಾಡಿಬಿಡುವುದು. ಯಾವ ಆಸೆಯಿಂದ ಮನುಷ್ಯನು ಪರಮಾನಂದವನ್ನು ಹೊಂದಿ ಉನ್ಮತ್ತನಾಗು ವನೋ, ಯಾವ ಆಸೆಯಿಂದ ಇಹಸಂಸಾರವನ್ನು ಸ್ವರ್ಗವೆಂದು ಜನಗಳು ಭಾವಿ ಸುವರೋ, ಯಾವ ಆಸೆಯಿಂದ ಜನಗಳು ತಮಗೆ ಸಂಭವಿಸುವ ಕಷ್ಟಗಳನ್ನೂ ತೃಣಕ್ಕಿಂತ ಕಡೆಯಾಗಿ ಕಾಣುವರೋ, ಅಂತಹ ಸುಖಕರವಾದ ಆಸೆಯನ್ನು ಚಿಂತೆಯು ಕ್ಷಣಕಾಲದಲ್ಲಿ ಧ್ವಂಸಮಾಡಿಬಿಡುವುದು.

ಶೋಭನೆಯು ಹಾಸಿಗೆಯ ಮೇಲೆ ಮಲಗಿದಳು. ಆದರೆ ಕುಸುಮದಂತೆ ಕೋಮಲವಾದ ಹಾಸಿಗೆಯು ಅವಳಿಗೆ ಮುಳ್ಳಿನಂತೆ ಕಂಡುಬಂದಿತು. ಶೋಭ ನೆಯು ಹಾಸಿಗೆಯನ್ನು ಬಿಟ್ಟಳು. ಸ್ವಲ್ಪ ಹೊತ್ತು ಏನೋ ಆಲೋಚಿಸುವವಳ ಹಾಗೆ ಇದ್ದಳು. ಅನಂತರ ಸಾವಿತ್ರಿಯು ಬಂದು ಶೋಭನೆಯ ವಿವಾಹದ ವಿಷಯವಾಗಿ ಮಾತನಾಡುತಿದ್ದಳು. ಅಲ್ಲಿಯೂ ಶೋಭನೆಯು ನಿಲ್ಲಲಾರದವಳಾಗಿ ಮತ್ತೆಲ್ಲಿಗೋ ಹೊರಟುಹೋದಳು.

---

## ಎಂಟನೆಯ ಪರಿಚ್ಛೇದ

ಚಂದ್ರನಾಥನು, ರಮೇಶಬಾಬುವಿನ ಮನೆಯಲ್ಲಿ ಒಬ್ಬ ಸಾಮಾನ್ಯನಾದ ಕೆಲಸಗಾರನಾಗಿದ್ದನೆಂಬುದನ್ನು ನಿಮಗೆ ಮೊದಲೇ ತಿಳಿಸಿದೆಯಷ್ಟೆ. ಅವನಿಗೆ ಬರುತ್ತಿದ್ದ ಸಂಬಳವು ಅವನ ಜೀವಧಾರಣೆಗೆ ಸಾಲದಾಗಿದ್ದಿತು. ಅದರಿಂದ ಅವನ ಮನೋರಥವು ನೆರವೇರುವುದಕ್ಕೆ ಅನುಕೂಲವಾಗುತ್ತಿರಲಿಲ್ಲ. ಚಂದ್ರ ನಾಥನು ಅತ್ಯಂತ ದರಿದ್ರನು. ದರಿದ್ರರ ದುಃಖವನ್ನು ಅವನು ಚೆನ್ನಾಗಿ ಅರಿತವ

ಸಾಗಿದ್ದನು. ಚಂದ್ರನಾಥನು ರಮೇಶನ ಮನೆಯಲ್ಲಿ ಕೆಲಸಕ್ಕೆ ಇದ್ದುದು ಮೊದಲ್ಗೊಂಡು ಯಾರಾದರೂ ದರಿದ್ರರು ರಮೇಶನ ಮನೆಗೆ ಬಂದರೆ ಅವರಿಗೆ ಕೈಲಾದ ಮಟ್ಟಿಗೂ ಸಾಹಾಯ್ಯಮಾಡಿ ಅವರನ್ನು ಸಂತೋಷದಿಂದ ಕಳುಹಿಸಿ ಕೊಡುತ್ತಿದ್ದನು. ಇದನ್ನು ರಮೇಶನು ತಿಳಿದುಕೊಂಡಿದ್ದನು. ರಮೇಶನಿಗೆ ಚಂದ್ರನಾಥನನ್ನು ಕಂಡರೆ ಬಹಳ ವಿಶ್ವಾಸವಿದ್ದಿತು.

ನಾವು ಈ ಕಥೆಯನ್ನು ಬರೆಯುವ ೨-೩ ವರ್ಷಗಳಿಗೆ ಹಿಂದೆ ಒಂದು ವಿಧವಾದ ಕ್ಷಾಮವು ಪ್ರಾಪ್ತವಾಗಿ ಸಾಧಾರಣ ಜನರು ಬದುಕುವುದು ಅತಿ ಪ್ರಯಾಸಸಕ್ಕೆ ಬಂದಿತು. ಆಗ ಚಂದ್ರನಾಥನು ದರಿದ್ರರಾರಾದರೂ ತನ್ನಲ್ಲಿ ಭಿಕ್ಷಾರ್ಥಿಗಳಾಗಿ ಬಂದರೆ ಅವರಿಗೆ ಇಲ್ಲವೆನ್ನದೆ ತನ್ನ ಕೈಲಾದುದನ್ನು ಕೊಟ್ಟು ಸಂತೋಷಪಡಿಸುತಲಿದ್ದನು. ಇವನ ಉದಾರ ಬುದ್ಧಿಯನ್ನು ನೋಡಿ ಅನೇಕ ದರಿದ್ರರು ಇವನ ಬಳಿಗೆ ಬರುವುದಕ್ಕೆ ಪ್ರಾರಂಭ ಮಾಡಿದರು. ಚಂದ್ರನಾಥನಿಗೆ ಇಷ್ಟು ಜನಗಳನ್ನು ಸಂತೋಷಪಡಿಸುವುದು ಬಹಳ ಕಷ್ಟಕ್ಕೆ ಬಂದಿತು. ಇವನು ಮೊದಲು ತನಗೆ ಸಂಭವಿಸಿರುವ ಕಷ್ಟವನ್ನು ಹೋಗಲಾಡಿಸಿಕೊಂಡು ಅನಂತರ ಇತರರ ಕಷ್ಟಮೋಚನೆಗೆ ಯತ್ನಮಾಡಬೇಕೆಂದು ಚಿಂತಿಸಿದನು. ಈ ಕೆಲಸಕ್ಕೆ ಚಾಕರಿಯು ಅಡ್ಡಿಯಾಗಿದ್ದಿತು. ಚಾಕರಿಯನ್ನು ಬಿಟ್ಟಲ್ಲದೆ ತನ್ನ ಮನೋರಥವು ನೆರವೇರಲಾರದೆಂದು ಚಿಂತಿಸಿ ಚಾಕರಿಯಿಂದ ಮುಕ್ತನಾಗಲು ಯತ್ನಿಸಿದನು. ಮಧ್ಯೇ ಮಧ್ಯೇ ವಿಧ ವಿಧ ವಾ ಗಿ ಚಿಂತೆಯು ಬರಲಾರಂಭವಾಯಿತು. “ಕೆಲಸ ಬಿಟ್ಟರೆ ಜೀವನವು ನಡೆಯುವ ಬಗೆ ಹೇಗೆ? ಯಾರು ತಾನೇ ಸುಮ್ಮನೆ ಕೂಡಿಸಿ ಅನ್ನ ಹಾಕುವರು? ಹಾಗೆ ಸುಮ್ಮನೆ ಕುಳಿತು ತಿಂದುಕೊಂಡಿರುವುದು ತಾನೇ ಹೇಗೆ? ನನಗೆ ಇನ್ನೂ ಮದುವೆ ಆಗಿಲ್ಲ. ನಾನೊಬ್ಬಂಟಿಗ, ನನ್ನೊಬ್ಬನ ಹೊಟ್ಟೆಗೆ ತಾನೇ ಎಷ್ಟು ಬೇಕಾದೀತು? ನನ್ನ ಹೊಟ್ಟೆಗೆ ಬೇಕಾದಷ್ಟು ದೇವರು ನಿರ್ಮಾಣ ಮಾಡಿಯೇ ಇಟ್ಟಿರುವನು. ಅದನ್ನರಿಯದೆ ಜನರು ಮುಂದೇನು ಗತಿಯೆಂದು ವೃಥಾ ವ್ಯಾಕುಲ ಪಡುವರು. ಇದು ತಪ್ಪು, ನನಗೂ ದೇವರು ಜೀವನವನ್ನು ಕಲ್ಪನೆ ಮಾಡಿರುವನು,” ಎಂದು ಮುಂತಾಗಿ ತರ್ಕವಿತರ್ಕಗಳನ್ನು ಮಾಡಿ, ರಮೇಶಬಾಬುವಿನಿಂದ ಅಪ್ಪಣೆಯನ್ನು ತೆಗೆದುಕೊಂಡು ಕೆಲಸ ಬಿಟ್ಟು ಹೊರಟು ಹೋದನು.

ನಂದನಪುರದಲ್ಲಿ ಆಬಾಲವೃದ್ಧರೂ ಚಂದ್ರನಾಥನನ್ನು ಚೆನ್ನಾಗಿ ಬಲ್ಲವರಾಗಿದ್ದರು. ಎಲ್ಲರೂ ಇವನನ್ನು “ಚಂದ್ರಮಾಮಾ” ಎಂದು ಕರೆಯತಲಿದ್ದರು. ಚಂದ್ರಮಾಮನ ಉದಾರಬುದ್ಧಿಯನ್ನೂ ಕಾರ್ಯದಕ್ಷತೆಯನ್ನೂ ನೋಡಿ, ಆ ಊರಿನವರೆಲ್ಲರೂ ಇವನನ್ನು ಬಹಳವಾಗಿ ಪ್ರೀತಿಸುತಲಿದ್ದರು. ಇವನ ಮಾತನ್ನು ಯಾರೂ ಮೀರದವರಾಗಿದ್ದರು. ಇವನಿಗೋಸ್ಕರ ಅಸಾಧ್ಯವಾದ ಕೆಲಸವನ್ನಾ

ದರೂ ಮಾಡಿಬಿಡುತಲಿದ್ದರು. ಕಾಲಕ್ರಮದಲ್ಲಿ ಚಂದ್ರಮಾಮನು ಒಂದು ಗುಂಪಿಗೆ ಯಜಮಾನನಾದನು. ಚಂದ್ರಮಾಮನು ರಮೇಶನ ಮನೆಯಲ್ಲಿದ್ದಾಗ ಅನೇಕ ಭಾಷೆಗಳನ್ನು ಕಲಿತಿದ್ದನು. ಈಗ ಗುಂಪಿಗೆ ಯಜಮಾನನಾಗಿ ಕಾಲೋಪಯೋಗಿಯಾದ ವೇಷಗಳನ್ನೂ, ಭಾಷೆಗಳನ್ನೂ ಉಪಯೋಗಿಸುತ್ತಾ ಎಲ್ಲರಿಗೂ ಬೇಕಾದವನಾಗಿ ಕಾಲವನ್ನು ಕಳೆಯುತಲಿದ್ದನು.

ನಂದನಪುರ ಗ್ರಾಮಕ್ಕೆ ೧೦-೧೨ ಮೈಲಿ ದೂರದಲ್ಲಿ ಒಂದು ದೊಡ್ಡದಾದ ಕಾಡು. ಆ ಕಾಡಿನ ಒಂದು ಭಾಗದಲ್ಲಿ ಜೀರ್ಣವಾಗಿಹೋಗಿದ್ದ ಒಂದು ಉಪ್ಪರಿಗೆಯ ಮನೆಯು ಇವನಿಗೆ ದರಬಾರ್ ಮಾಡುವುದಕ್ಕೆ ತಕ್ಕುದಾದ ಸ್ಥಲವಾಗಿದ್ದಿತು. ಅಲ್ಲಿದ್ದುಕೊಂಡೇ ಇವನು ಮಾಡಬೇಕಾದ ಕೆಲಸವನ್ನು ಮಾಡುತಲಿದ್ದನು. ದರಿದ್ರರಿಗೆ ದಾನ ಮುಂತಾದುವುಗಳನ್ನು ಕೊಡುತಲಿದ್ದನು. ಪ್ರತಿನಿತ್ಯವೂ ದರಿದ್ರರ ಸಂಖ್ಯೆಯಿಂದ ಅವನ ಮನೆಯು ಪೂರ್ಣವಾಗಿ ಹೋಗುತಲಿದ್ದಿತು. ಚಂದ್ರಮಾಮನನ್ನು ಯಾಚಿಸಿದವರು ವ್ಯರ್ಥ ಮನೋರಥರಾಗಿ ಹಿಂದುರುಗಿದರೆಂಬ ಮಾತು ಯಾರ ಬಾಯಿಂದ ಬಂದುದನ್ನೂ ನಾವು ಬೇರೆ ಕೇಳಲಿಲ್ಲ. ಚಂದ್ರಮಾಮನು ತನ್ನ ಜೀವನಕ್ಕೋಸ್ಕರ ಕಳ್ಳತನವನ್ನು ಮಾಡುತ್ತಿರಲಿಲ್ಲ. ಅವನ ಗುಂಪಿನವರು ಮಾತ್ರ ಐಶ್ವರ್ಯವಂತರಾಗಿಯೂ, ಕೃಪಣರಾಗಿಯೂ ಇರತಕ್ಕ ಜನರಿಂದ ಹಣಮುಂತಾದುದನ್ನು ಕದ್ದು ಚಂದ್ರಮಾಮನ ಭಂಡಾರವನ್ನು ತುಂಬುತಿದ್ದರು. ಇವನು ಬಂದ ಬಡವರಿಗೆಲ್ಲಾ ಅದನ್ನು ದಾನಮಾಡುತಲಿದ್ದನು. ಅದು ಕಾರಣ ಚಂದ್ರಮಾಮನನ್ನು ಯಾರೂ ದ್ವೇಷಿಸಿ ಅವನಿಗೆ ಅನಿಷ್ಟಾಚರಣೆಯನ್ನು ಮಾಡಲು ಉದ್ಯುಕ್ತರಾಗುತ್ತಿರಲಿಲ್ಲ.

ಚಂದ್ರಮಾಮನು ಬಡಜನರಿಗೆ ಆಧಾರಿ. ದುಷ್ಟರಾದ ಜಮೀನ್ದಾರರಿಗೆ ಪರಮ ವಿರೋಧಿ. ಬಲಹೀನರಿಗಾಗಲಿ, ಹೆಂಗುಸರಿಗಾಗಲಿ, ಯಾರಾದರೂ ಅತ್ಯಾಚಾರಮಾಡತಕ್ಕವರೆಂದು ಚಂದ್ರಮಾಮನಿಗೆ ತಿಳಿದುಬಂದರೆ, ಅಂತಹ ಅತ್ಯಾಚಾರಿಗಳನ್ನು ಪ್ರಾಣದೊಡನೆ ಬಿಡುತ್ತಿರಲಿಲ್ಲ.

ಗ್ರಾಮದಲ್ಲಿ ಎಲ್ಲಿ ಏನು ನಡೆದರೂ ಚಂದ್ರಮಾಮನು ಅಲ್ಲಿ ಸಿದ್ಧನಾಗಿದ್ದು ತಾನು ಮಾಡಬೇಕಾದ ಕೆಲಸವನ್ನು ಮಾಡುತಲಿದ್ದನು. ಸರ್ವಪ್ರಕಾರದಲ್ಲಿಯೂ ಇತರರಿಗೆ ಸಾಹಾಯ್ಯವಾಗುವುದಾದರೆ ಸರಿ ಎಂದು ಚಂದ್ರಮಾಮನು ನಂಬಿದ್ದನು. ಈಗ ರಮೇಶಬಾಬುವಿನ ಮನೆಯಲ್ಲಿ ಒಂದು ಕೆಲಸವಿದ್ದುದರಿಂದ ಚಂದ್ರನಾಥನು ರಮೇಶನಲ್ಲಿಗೆ ಬಂದುದು. ಚಂದ್ರನಾಥನು ಬಹುದಿನಕ್ಕೆ ಮುಂಚೆಯೇ ಇಲ್ಲಿಗೆ ಬಂದು ತಾನು ಮಾಡಬೇಕಾದ ಕೆಲಸವನ್ನು ಭೃತ್ಯನಂತೆ ಮಾಡುತಲಿದ್ದನು. ಇವನಲ್ಲಿ ಎಲ್ಲರಿಗೂ ವಿಶ್ವಾಸವಿದ್ದುದರಿಂದ ಕೆಲಸವಾದ ಮೇಲೂ ಎರಡು ಮೂರು ದಿನಗಳು ಇವನನ್ನು ಇಟ್ಟುಕೊಂಡು ಕಳುಹಿಸಿಕೊಡುತಲಿದ್ದರು.

ಚಂದ್ರಮಾಮನಿಗೆ ಶೋಭನೆಯನ್ನು ಕಂಡರೆ ಪ್ರಾಣ, ಅವನು ರಮೇಶನ ಮನೆಗೆ ಬಂದಾಗಲೆಲ್ಲಾ, ಶೋಭನೆಯನ್ನು ನೋಡದೇ ಹಿಂದಿರುಗಿ ಹೋಗುತಲಿರಲಿಲ್ಲ, ಈಗಲೂ ಶೋಭನೆಯನ್ನು ನೋಡುವುದಕ್ಕೋಸ್ಕರ ಬಂದವನು ಶೋಭನೆಯನ್ನು ಅಲ್ಲಲ್ಲಿ ಹುಡುಕಲಾರಂಭಿಸಿದನು. ಕೊನೆಗೆ ಅವಳು ಮಹಡಿಯ ಮೇಲಿರಬಹುದೆಂದು ತಿಳಿದು ಅಲ್ಲಿಗೆ ಹೋಗಿ ಶೋಭನೆಯೊಡನೆ ಬೇಕು ಬೇಕಾದ ಮಾತುಗಳನ್ನಾಡಿಕೊಂಡು ಚಂದ್ರಮಾಮನು ಹಿಂದಿರುಗಿ ತನ್ನ ಮನೆಗೆ ತೆರಳಿದನು.

---

## ಒಂಬತ್ತನೆಯ ಪರಿಚ್ಛೇದ

ಕೆಲವು ದಿನಗಳು ಕಳೆದನಂತರ, ರಮೇಶನು ಚಂದ್ರನಾಥನನ್ನು ಬರುವಂತೆ ಹೇಳಿಕಳುಹಿಸಿದನು. ಹರವಲ್ಲಭನ ಮನೆಗೆ ಹೋಗಿ, ಶೋಭನೆಯ ವಿವಾಹದ ವಿಷಯವಾಗಿ ನಿಶ್ಚಯಮಾಡಿಕೊಂಡು ಬರಬೇಕೆಂಬುದೇ ರಮೇಶನ ಉದ್ದೇಶ. ಅದುಕಾರಣ ಚಂದ್ರಮಾಮನಿಗೆ ಹೇಳಿಕಳುಹಿಸಿದನು. ರಮೇಶನು ಶೋಭನೆಯ ವಿವಾಹದ ವಿಷಯವಾಗಿ ಯಾರೊಡನೆಯೂ ಆಲೋಚನೆ ಮಾಡಲಿಲ್ಲ. ಚಂದ್ರನಾಥನೂ ಬಂದು ಸೇರಿದನು. ಅವನೊಡನೆ ರಮೇಶನು ತನ್ನ ಮನೋಗತವನ್ನು ಆದ್ಯೋಪಾಂತವಾಗಿ ತಿಳಿಸಿದನು.

ಚಂದ್ರನಾಥನು, ಹರವಲ್ಲಭನ ಮಗನನ್ನು ಬಲ್ಲವನಾಗಿದ್ದನು. ರಮೇಶನು ತನ್ನ ಅಭಿಪ್ರಾಯವೆಲ್ಲವನ್ನೂ ಹೇಳಿದನಂತರ, ಚಂದ್ರನಾಥನು ರಮೇಶನನ್ನು ಒಂದು ವಿಧವಾಗಿ ನೋಡಿದನು. ಬಾಯಿಯಿಂದ ಏನನ್ನೂ ಮಾತನಾಡಲಿಲ್ಲ. ಚಂದ್ರನಾಥನ ದೃಷ್ಟಿಯಿಂದ ಇದು ಯುಕ್ತವಲ್ಲವೆಂದು ಸೂಚಿತವಾದ ಅಂಶವು ರಮೇಶನಿಗೆ ಗೊತ್ತಾಗದೇ ಇರಲಿಲ್ಲ. ಆದರೂ ರಮೇಶನು ಚಂದ್ರನಾಥನನ್ನು ನೋಡಿ—ಚಂದ್ರ ! ನಿನ್ನ ಅಭಿಪ್ರಾಯವು ನನಗೆ ಗೊತ್ತಾಯಿತು. ಆದರೆ ಸಂಬಂಧಕ್ಕೆ ತಕ್ಕವರಾದ ಮನೆತನದವರು ಈಕಡೆ ಬಹಳ ಕಡಮೆ. ಅದರಲ್ಲಿಯೂ ಉತ್ತಮನಾದ ವರನು ಸಿಕ್ಕುವುದು ಬಹಳ ಕಷ್ಟ. ಹರವಲ್ಲಭನು ದೊಡ್ಡ ಜಮೀನ್ದಾರನು. ಹೆಚ್ಚಾದ ಐಶ್ವರ್ಯಕ್ಕೆ ಅಧಿಕಾರಿ. ಅವನಿಗೆ ಒಬ್ಬನೇ ಮಗನು. ಈ ಮಗನೊಡನೆ ವಿವಾಹದಲ್ಲಿ ನಮಗೇನು ಪ್ರತಿಬಂಧಕವಿದ್ದೀತು ? ಶೋಭನೆಯು ಸುಖವಾಗಿ ಬಾಳುವಳಲ್ಲಾ, ಹಾಗಿರಲಿ. ಶೋಭನೆಗಾದರೋ ದಿನೇ ದಿನೇ ವಯಸ್ಸಾಗುತ್ತ ಬರುತ್ತಿದೆ. ಇನ್ನು ನಾವು ನಾವಕಾಶಮಾಡಿದಲ್ಲಿ ನಮ್ಮ ಕಾರ್ಯವೆಲ್ಲವೂ ಕೆಟ್ಟುಹೋಗುವುದು. ಇದು ಅಲ್ಲದೆ ಮೊದಲೇ ಹರವಲ್ಲಭನೊಡನೆ ಈ ವಿಷಯವಾಗಿ ಮಾತು ಕಥೆಗಳು ನಡೆದು ವಿವಾಹಸಂಬಂಧವು ಸ್ಥಿರ

ಪಟ್ಟಿರುವುದು. ಈಗ ಹರವಲ್ಲಭನ ಅನುಮತಿಯನ್ನು ಪಡೆದು ವಿವಾಹದ ದಿನವನ್ನು ನಿಶ್ಚಯಮಾಡುವುದೊಂದೇ ಉಳಿದಿರುವುದು, ಎಂದು ಹೇಳಿದನು.

ಚಂದ್ರನಾಥನು ರಮೇಶನ ಮಾತನ್ನು ಕೇಳಿ—ರಮೇಶಬಾಬು! ಇಷ್ಟರ ಮಟ್ಟಿಗೆ ವಿವಾಹವು ನಿಶ್ಚಿತವಾದ ಮೇಲೆ ನಾನು ಈ ವಿಷಯದಲ್ಲಿ ಹೇಳತಕ್ಕುದೇನಿದೆ. ಈ ಸಂಬಂಧವು ನನಗೆ ಯುಕ್ತವಾಗಿ ಕಾಣಿಸುವುದಿಲ್ಲ. ಮೇಲೆ ಹೇಳಿದ ರೀತಿಯಲ್ಲಿ ಹಣವನ್ನೇ ಮುಖ್ಯವಾಗಿಟ್ಟುಕೊಂಡು ಶೋಭನೆಗೆ ವಿವಾಹ ಮಾಡುವುದು ನಿನಗೆ ಪರಮೋದ್ದೇಶವಾಗಿದ್ದರೆ, ಆರೀತಿ ಮಾಡಬಹುದು. ನನ್ನ ಅಡ್ಡಿಯಿಲ್ಲ. ನನ್ನ ಅಭಿಪ್ರಾಯದಲ್ಲಿ ಹಣವು ಒಂದು ಸಾಮಾನ್ಯವಾದುದು. ಹಣವು ಈಗ ಒಬ್ಬರಲ್ಲಿಯೂ, ನಾಳೆ ಮತ್ತೊಬ್ಬರಲ್ಲಿಯೂ ಇರುವುದು. ಲಕ್ಷ್ಮಿಯು ಬಹಳ ಚಂಚಲೆ. ಯಾರಲ್ಲಿಯೂ ಸ್ಥಿರವಾಗಿ ನಿಲ್ಲುವುದಿಲ್ಲ. ಹಣವಿದ್ದರೂ ಗುಣಹೀನನಾದವನಲ್ಲಿ, ಸ್ತ್ರೀಯು ಯಾವಾಗಲೂ ವ್ಯಸನಪಡಬೇಕಾಗುವುದು. ಗುಣವಂತನು ದರಿದ್ರನಾದರೂ ಸ್ತ್ರೀಯರು ಅವನಲ್ಲಿ ಸುಖಪಡುವರು. ಸ್ತ್ರೀಯರ ಪಾದತಲದಲ್ಲಿ ಕೋಟಿದ್ರವ್ಯವನ್ನು ಸುರಿದರೂ ಅವರಿಗೆ ಸಂತೋಷವಿಲ್ಲ, ಸುಖವಿಲ್ಲ. ದರಿದ್ರನಾದರೂ ಪ್ರೀತಿಸತಕ್ಕ ಗಂಡನೊಬ್ಬನಿದ್ದರೆ ಸ್ತ್ರೀಯರು ಸ್ವರ್ಗಸುಖವನ್ನು ಕೂಡ ತುಚ್ಛವಾಗಿ ಎಣಿಸಬಲ್ಲರು. ಆ ದಾರಿದ್ರ್ಯದಿಂದ ಎಷ್ಟೇ ಕಷ್ಟ ಬಂದೊದಗಿದರೂ ಅವರು ಅದನ್ನು ಲೆಕ್ಕಿಸುವುದಿಲ್ಲ. ರಮೇಶಬಾಬುಗಳೆ! ನೀವು ನನಗೆ ಸ್ವಾಮಿ. ನಾನು ತಮಗೆ ದಾಸಾನುದಾಸ. ನನಗಿಂತಲೂ ತಾವು ವಿದ್ಯಾಬುದ್ಧಿಯಲ್ಲಿ ಬಹಳವಾಗಿ ಅಧಿಕರು. ಆದರೂ ಈ ಸಂದರ್ಭದಲ್ಲಿ ಹರವಲ್ಲಭನ ಸಂಬಂಧವನ್ನು ಬಳೆಯಿಸುವುದು ನನಗೆ ಸರಿಯಾಗಿ ಕಂಡುಬರುವುದಿಲ್ಲ, ಎಂದು ಮುಂತಾಗಿ ಚಂದ್ರನಾಥನು ಹೇಳಿದುದನ್ನು ರಮೇಶನು ಕೇಳಿ, ಗಂಭೀರಭಾವವನ್ನು ತಾಳಿ ಚಿಂತಾಸಾಗರದಲ್ಲಿ ಮುಳುಗಿದನು. ಅನಂತರ ಚಂದ್ರನಾಥನನ್ನು ಕುರಿತು—ಚಂದ್ರ! ಈ ವಿಷಯದಲ್ಲಿ ನೀನು ಹೇಳಿದುದೆಲ್ಲವೂ ಸತ್ಯ. ಆದರೆ ಒಂದು ವಿಧವಾಗಿ ವಿವಾಹವು ನಿಶ್ಚಿತವಾಗಿ ಹೋಗಿರುವುದರಿಂದ ನಾನು ಕೇವಲ ವ್ಯಸನಪಡಬೇಕಾಗಿದೆ. ನಾನು ಆತನಿಗೆ ಮೊದಲು ಮಾತು ಕೊಟ್ಟು ಈಗ ತಪ್ಪುವುದಾದರೆ ಜನಗಳು ಏನೆಂದಾರು ? ನನ್ನಂಥವನು ಮಿಥ್ಯಾವಾದಿಯಾಗಬಹುದೆ ? ನಾನು ಮಾತು ತಪ್ಪಿದ ಮೇಲೆ ಜನಗಳು ನನ್ನಲ್ಲಿ ವಿಶ್ವಾಸವಿಟ್ಟಾರೆ! ಚಂದ್ರ, ಈಗ ಹರವಲ್ಲಭನನ್ನು ನೋಡಿ ಮಾತನಾಡುವೆನು. ಅವನಿಗೆ ಸ್ವಲ್ಪವೇನಾದರೂ ಅಭಿಪ್ರಾಯ ಕಡಮೆಯಾಗಿದ್ದ ಪಕ್ಷದಲ್ಲಿ ಆ ಸಂಬಂಧವನ್ನು ತಪ್ಪಿಸಿ ಬೇರೆ ಆಲೋಚಿಸುವೆನು. ಹರವಲ್ಲಭನು ಒಪ್ಪುವುದಾದರೆ ನನ್ನ ಯತ್ನವೇನೂ ಇರುವುದಿಲ್ಲ. ಆಮೇಲೆ ಶೋಭನೆಯು ಹಣೆಯಲ್ಲಿ ಬರೆದಿದ್ದಂತಾಗಲಿ, ಇದಕ್ಕೆ ನಾವೇನು ಮಾಡುವುದಕ್ಕಾದೀತು ? ಎಂದು ಹೇಳಿದನು.

ಇದನ್ನು ಕೇಳಿ ಚಂದ್ರನಾಥನು ರಮೇಶನನ್ನು ಕುರಿತು—ಬಾಬು ! ಹೀಗೆ ಹೇಳುವುದರಿಂದ ಶೋಭನೆಗೆ ಹಿತವನ್ನು ಬಯಸಿದಂತಾಗಲಿಲ್ಲ. ನಿನ್ನ ಗೌರವದ ಮೇಲೆ ನಿನಗೆ ಹೇಗೆ ದೃಷ್ಟಿಯೋ ಹಾಗೆಯೇ ಶೋಭನೆಯ ಕ್ಷೇಮ ಚಿಂತೆ ಯಲ್ಲಿಯೂ ಇರಬೇಕು. ಪ್ರತಿಕೂಲ ಸಂಘಟನೆಯಾದಲ್ಲಿ ಯಾವಜ್ಜೀವವೂ ಸಂಕಟ ಪಡುವಳು ಶೋಭನೆಯೇ ಹೊರತು ನೀನಲ್ಲ. ಮುಖ್ಯವಾಗಿ ಹೆಣ್ಣು ಮಕ್ಕಳಿಗೆ ಸುಖವುಂಟಾಗತಕ್ಕುದನ್ನು ನೋಡಬೇಕೇ ಹೊರತು ಕಾಟಾಚಾರಕ್ಕೆ ಮಾಡತಕ್ಕು ದಲ್ಲ. ಚೆನ್ನಾಗಿ ಆಲೋಚನೆ ಮಾಡಿ ಕೆಲಸಮಾಡುವುದು ಒಳ್ಳೆಯದು, ಎಂದು ಚಂದ್ರನಾಥನು ತನ್ನ ಅಭಿಪ್ರಾಯವನ್ನು ರಮೇಶನಿಗೆ ತಿಳಿಸಿ ಸುಮ್ಮನಾದನು. ರಮೇಶನು ಚಂದ್ರನಾಥನ ಮಾತಿಗೆ ಮತ್ತೆ ಉತ್ತರಕೊಡದವನಾಗಿ ಬಹಳ ಹೊತ್ತು ಸುಮ್ಮನಿದ್ದನು. ಸ್ವಲ್ಪ ಹೊತ್ತಾದ ಮೇಲೆ ಚಂದ್ರನನ್ನು ನೋಡಿ—ಹುಡುಗಿಯ ಹಣೆಯಲ್ಲಿ ಬರೆದಂತೆ ಆಗಲಿ, ನಾನಂತೂ ಹರವಲ್ಲಭನ ಮನೆಗೆ ಹೋಗತಕ್ಕವನು, ಎಂದು ಹೇಳಿ ಇಬ್ಬರೂ ಮನೆಯಿಂದ ಹೊರಗೆ ಹೊರಟುಹೋದರು.

---

## ಹತ್ತನೆಯ ಪರಿಚ್ಛೇದ

ಬೇಸುಗೆಯ ಕಾಲ. ಸೂರ್ಯದೇವನು ಪ್ರಬಲವಾದ ಪ್ರಕಾಶದಿಂದ ಭೂಮಿ ಯನ್ನು ಶಾಸನಮಾಡುವುದಕ್ಕೆ ಪ್ರಾರಂಭಮಾಡಿದನು. ಸೂರ್ಯಕಿರಣಗಳಿಂದ ಜಗವೆಲ್ಲವೂ ಸಂತಾಪಪಡುತಲಿರುವುದು. ತರುಲತಾಗುಲ್ಮಾದಿಗಳು ಬೇಗೆಯನ್ನು ತಡೆಯಲಾರದೆ ತಲೆಯನ್ನು ಬಗ್ಗಿಸಿಕೊಂಡಿರುವುವು. ಮೈದಾನಗಳಲ್ಲಿನ ತೃಣಾದಿ ಗಳು ಸುಟ್ಟು ಭಸ್ಮವಾಗಿಹೋದುವು. ವಾಯುವು ಸೂರ್ಯನ ಪ್ರತಾಪವನ್ನು ತಡೆಯ ಲಾರದೇ ಎಲ್ಲಿಯೋ ದೂರವಾಗಿ ಹೊರಟು ಹೋಯಿತು. ಗ್ರೀಷ್ಮಕಾಲದಲ್ಲಿ ಸೂರ್ಯ ದೇವನ ಮುಂದೆ ಇತರ ಪ್ರತಾಪಶಾಲಿಗಳೆಲ್ಲರೂ ನಿಲ್ಲದೇ ಮಾಯವಾಗಿ ಹೋದರು. ಎಲ್ಲಿ ನೋಡಿದರೂ ಭಯಂಕರ, ಎಲ್ಲಿ ನೋಡಿದರೂ ಜ್ವಾಲಾಮಯ, ಎಲ್ಲಿ ನೋಡಿ ದರೂ ನಿಷ್ಪಂದ, ನಿಶ್ಶಬ್ದ. ಕೆಲಕೆಲವು ಪಕ್ಷಿಗಳು ಮಾತ್ರ ಗಿಡದ ಎಲೆಗಳ ಮರೆ ಯಲ್ಲಿ ಕುಳಿತು ಅವ್ಯಕ್ತಮಧುರವಾದ ಧ್ವನಿಯನ್ನು ಮಾಡುತಲಿರುವುವು.

ಹರವಲ್ಲಭನ ಮನೆಯು ಈ ದಿನ ನಿಶ್ಶಬ್ದ ಮತ್ತು ಜನಶೂನ್ಯವಾಗಿರುವುದು. ಮನೆಯಲ್ಲಿದ್ದ ಸ್ವಲ್ಪ ಜನಗಳ ಸ್ವರವು ಕೂಡ ಪರಸ್ಪರ ಯಾರಿಗೂ ಕೇಳಿಬರುತ ಲಿರಲಿಲ್ಲ. ಮನೆಯ ಸಿಂಹದ್ವಾರವು ತೆರೆಯಲ್ಪಟ್ಟಿದೆ. ಕಿಟಕಿಗಳು ಮಾತ್ರ ಎಲ್ಲೆಲ್ಲಿಯೂ ಮುಚ್ಚಲ್ಪಟ್ಟು, ಮನೆಯಲ್ಲಿ ವಾಯುರೋಧವುಂಟಾಗಿದೆ. ಮನೆಯ ಬಾಗಿಲಲ್ಲಿ ೩-೪ ಜನ ಮಾತ್ರ ಕುಳಿತು ಪಿಸಪಿಸನೆ ಮಾತನಾಡುತಲಿರುವರು. ಒಬ್ಬ

ಬ್ಬರು ಮಾತ್ರ ಬಿಸಲಿನ ತಾಪಕ್ಕೆ ಹಾಸಿಗೆಯ ಮೇಲೆ ಮಲಗಿ ಪ್ರಣಯಸಂಭಾಷಣೆಯನ್ನು ಮಾಡುತಲಿದ್ದರು. ಹಾಗೆಯೇ ಸ್ವಲ್ಪ ಒಳಗೆ ಪ್ರವೇಶಮಾಡಿದಲ್ಲಿ ವಿಶಾಲವಾಗಿಯೂ ಎತ್ತರವಾಗಿಯೂ ಇರುವ ಹಜಾರ. ಹಜಾರದ ಬಲಗಡೆ ದಪ್ತರಖಾನೆ. ಅಲ್ಲಿ ಮುನಿಷಿಯು ಕುಳಿತು ಲೆಖ್ಖಪತ್ರಗಳನ್ನು ನೋಡುತಲಿರುವನು. ಹಜಾರದ ಎಡಗಡೆ ಒಂದು ಸುಸಜ್ಜಿತವಾದ ಕೊಠಡಿಯಲ್ಲಿ ಹರವಲ್ಲಭಬಾಬುವು ಹಾಸಿಗೆಯ ಮೇಲೆ ಮಲಗಿದ್ದನು. ರಮೇಶಬಾಬುವಿನ ಮನೆಯಿಂದ ಬಂದಾಗಿನಿಂದಲೂ ಹರವಲ್ಲಭನ ಶರೀರದಲ್ಲಿ ಸ್ವಸ್ಥತೆಯಿರಲಿಲ್ಲ. ಹರವಲ್ಲಭನಿಗೆ ದಿನೇದಿನೇ ರೋಗವು ವೃದ್ಧಿಯಾಗುವುದರಲ್ಲಿದ್ದಿತು. ಡಾಕ್ಟರುಗಳ ಔಷಧಗಳೂ, ವೈದ್ಯರ ಚಿಕಿತ್ಸೆಗಳೂ, ಎಲ್ಲವೂ ನಿಷ್ಫಲವಾಗಿ ಕಂಡುಬಂದುವು. ಡಾಕ್ಟರಿಗಾಗಿ ಸಾವಿರಾರು ರೂಪಾಯಿ ವೆಚ್ಚವಾಗಿ ಹೋಯಿತು. ಒಳ್ಳೆ ಒಳ್ಳೆ ಔಷಧಕ್ಕೇನೂ ಕೊರತೆಯಿರಲಿಲ್ಲ. ರೋಗ ಮಾತ್ರ ಹೆಚ್ಚುತ್ತಲಿತ್ತೇ ಹೊರತು ಕಡಮೆಯಾಗುವ ಸಂಭವ ಕಂಡುಬರಲಿಲ್ಲ.

ಈ ಸಮಯಕ್ಕೆ ಸರಿಯಾಗಿ ರಮೇಶನು ಮತ್ತು ಚಂದ್ರನಾಥನು ಹರವಲ್ಲಭನ ಮನೆಗೆ ಬಂದು ಸೇರಿದರು. ಅಲ್ಲಿದ್ದ ಭೃತ್ಯನೊಬ್ಬನು ಇವರನ್ನು ದಿವಾನನ ಹತ್ತಿರಕ್ಕೆ ಕರೆದುಕೊಂಡು ಹೋದನು. ದಿವಾನನು ರಮೇಶನನ್ನು ಬಲ್ಲವನಾಗಿದ್ದ ಕಾರಣ, ಅವನೊಡನೆ ಏನನ್ನೂ ಮಾತನಾಡದೇ, ಬಂದವರನ್ನು ಮನೆಯ ಯಜಮಾನನಾದ ಹರವಲ್ಲಭ ಬಾಬುವಿನ ಹತ್ತಿರ ಕರೆದುಕೊಂಡು ಹೋದನು. ಅಲ್ಲಿಗೆ ಹೋಗುತ್ತಿರುವಾಗ ಹರವಲ್ಲಭನಿಗೆ ಅಸ್ವಸ್ಥವೆಂಬುದು ಗೊತ್ತಾಯಿತು. ಮೂರು ಜನರೂ ಹರವಲ್ಲಭನ ಕೊಠಡಿಗೆ ಹೋದರು. ಆಗ ಯಜಮಾನನು ನಿದ್ರೆ ಹೋಗುತ್ತಲಿದ್ದನು. ಇಬ್ಬರು ಭೃತ್ಯರು ಅವನಿಗೆ ಗಾಳಿಹಾಕುತಲಿದ್ದರು. ಹರವಲ್ಲಭನು ರಾತ್ರಿಯಲ್ಲಿ ರೋಗದಿಂದ ಪೀಡಿತನಾಗಿ ನಿದ್ರೆಯಿಲ್ಲದೆ ಈಗ ಮಾತ್ರ ಸ್ವಲ್ಪ ನಿದ್ರೆಹೋಗುತಲಿದ್ದನು. ರಮೇಶನು ಅಲ್ಲಿಗೆ ಹೋಗಿ ರೋಗಿಯ ಸಮೀಪದಲ್ಲಿ ಕುಳಿತುಕೊಂಡನು. ರೋಗಿಯ ಸ್ಥಿತಿಯನ್ನು ವಿಚಾರಮಾಡುತ್ತಾ ಕೆಲವು ಕಾಲ ಕಳಿದನು. ದಿವಾನನು ರಮೇಶನ ಅಪ್ಪಣೆಯನ್ನು ತೆಗೆದುಕೊಂಡು ತನ್ನ ಕೆಲಸಕ್ಕೆ ಹೊರಟುಹೋದನು.

ಒಂದೆರಡು ಘಂಟೆಗಳ ತನಕ ಹರವಲ್ಲಭನು ನಿದ್ರೆಮಾಡಿದನಂತರ ಕಣ್ಣು ಬಿಟ್ಟನು. ಆಗ ಅವನ ಭೃತ್ಯರಲ್ಲೊಬ್ಬನು ನಂದನಪುರದ ರಮೇಶಬಾಬುವು ಬಂದಿರುವನೆಂದು ಅರುಹಿದನು. ಹರವಲ್ಲಭನಿಗೆ ರಮೇಶನ ಹೆಸರು ಕೇಳುತಲೇ ಪೂರ್ವಕಥೆಯು ಜ್ಞಾಪಕಕ್ಕೆ ಬಂದಿತು. ರಮೇಶನು ಬಂದಿರುವುದಕ್ಕೆ ಕಾರಣವನ್ನು ತಿಳಿದುಕೊಂಡನು. ಅನಂತರ ರಮೇಶನನ್ನು ಕುರಿತು—ಬಾಬು! ನಿಮ್ಮ ಮನೆಯಿಂದ ನಾನು ಬಂದವನು ರೋಗದಿಂದ ಹಾಸಿಗೆಹತ್ತಿ ಬಿದ್ದಿರುವೆನು.

ನನಗೆ ರೋಗವು ದಿನೇ ದಿನೇ ವೃದ್ಧಿಯಾಗುತ್ತಿರುವಂತಿದೆ. ನನಗೆ ಆರೋಗ್ಯವು ಉಂಟಾಗುವ ವರೆಗೂ ಯಾವ ಮಾತನ್ನೂ ಆಡುವುದಕ್ಕೆ ಆಗುವುದಿಲ್ಲ. ರೋಗವಾದರೋ ಪ್ರಬಲತರವಾದುದು, ಅದು ವಾಸಿಯಾಗುವುದಕ್ಕೆ ಬಹಳ ಕಾಲ ಬೇಕೆಂದು ವೈದ್ಯರೂ ಹೇಳುವರು. ನನಗೆ ಸ್ವಲ್ಪ ಗುಣ ತೋರಿದರೂ ನಾನು ಮದುವೆಮಾಡುವುದರಲ್ಲಿ ಹಿಂದೆಗೆಯುವನಲ್ಲ. ಈಗ ಯಾವ ವಿಷಯವನ್ನು ಮಾತನಾಡುವುದಕ್ಕೂ ನನಗೆ ಶಕ್ತಿ ಸಾಲದುದಾಗಿದೆ, ಎಂದು ಹೇಳಿದನು.

ರಮೇಶನು ಹರವಲ್ಲಭನ ಮಾತನ್ನು ಕೇಳಿ,—ನಾನೂ ಈಗ ಯಾವ ಮಾತನ್ನೂ ಆಡುವುದಿಲ್ಲ. ನೀವೇ ಮದುವೆಯ ವಿಚಾರವನ್ನು ಎತ್ತಿದುದರಿಂದ ಹೇಳಬೇಕಾಗಿರುವುದು. ನನ್ನ ಮಗಳಿಗಾದರೋ ವಿವಾಹಕಾಲವು ಮೀರಿ ಹೋಗಿದೆ. ಇನ್ನು ಸಾವಕಾಶಮಾಡಲು ಆಗಲಾರದು, ಎಂದನು.

ಹರ—ವಿವಾಹವೇನೋ ನಿಶ್ಚಯವಾಗಿರುವುದಷ್ಟೆ. ನನಗೆ ಸ್ವಲ್ಪ ಗುಣವಾದರೆ ಮುಹೂರ್ತವನ್ನು ನಿಶ್ಚಯಮಾಡಬಹುದು. ನಾನು ಹೊಸ ಡಾಕ್ಟರನ್ನು ಕರೆಯಿಸಿರುವೆನು. ಅವನು ಒಳ್ಳೇ ಔಷಧವನ್ನು ಕೊಡುತ್ತಲಿರುವನು. ತಾವು ಅವನನ್ನು ಕೇಳಿ ನನ್ನ ರೋಗವು ಯಾವಾಗ ವಾಸಿಯಾಗಬಹುದೆಂದು ವಿಚಾರಿಸೋಣವಾಗಲಿ.

ರಮೇಶ—(ಸ್ವಲ್ಪ ನಕ್ಕು)—ಮುಖ್ಯವಾಗಿ ನಿಮಗೆ ಗುಣವಾಗಬೇಕೆಂಬುದೇ ನನ್ನ ಪರಮೋದ್ದೇಶ, ಮದುವೆ ಈಗ ಆಗದಿದ್ದರೂ, ಕೆಲವುಕಾಲವಾದ ಮೇಲಾದರೂ ಆಗಿಯೇ ಆಗುವುದು.

ಹರ—ಹಾಗಾದರೆ ತಾವು ವಿವಾಹವಿಷಯದಲ್ಲಿ ಆಲೋಚಿಸತಕ್ಕ ಅವಶ್ಯಕವಿರುವುದಿಲ್ಲ—ಹೇಗಾದರೂ ನಿಮ್ಮ ಕನ್ಯೆಯನ್ನು ನನ್ನ ಮಗನಿಗೆ ಕೊಟ್ಟು ವಿವಾಹವಾಗುವುದೇನೋ ನಿಜ. ಇನ್ನು ತಾವು ಆ ಆಲೋಚನೆಯನ್ನು ಬಿಡಿ.

ಹರವಲ್ಲಭನ ಮಾತನ್ನು ಕೇಳಿ ರಮೇಶನು ಮತ್ತೇನನ್ನೂ ಮಾತನಾಡದೇ ಹರವಲ್ಲಭನ ರೋಗದ ವಿಷಯವಾಗಿ ಪ್ರಸ್ತಾಪಿಸುತ್ತಿದ್ದನು.

ಕ್ರಮವಾಗಿ ಸೂರ್ಯನ ತಾಪವು ಕಡಮೆಯಾಗುತ್ತ ಬಂದಿತು. ಮಂದಮಾರುತವು ಬೀಸಲಾರಂಭವಾಯಿತು. ಎಲ್ಲಿ ನೋಡಿದರೂ ಆನಂದವೇರ್ಪಟ್ಟಿತು. ಪುಷ್ಪಗಳ ವಾಸನೆಯು ದಿಗಂತವನ್ನು ವ್ಯಾಪಿಸಿ ಜನರನ್ನು ಸಂತೋಷಗೊಳಿಸಲಾರಂಭಿಸಿತು. ಸಂಧ್ಯಾಕಾಲವಾದುದನ್ನು ನೋಡಿ, ಹರವಲ್ಲಭನು ರಮೇಶನನ್ನು ಕುರಿತು,—ಈ ರಾತ್ರಿಯಿದ್ದು ಭೋಜನಾದಿಗಳನ್ನು ತೀರಿಸಿಕೊಂಡು ಹೋಗ

ಬೇಕು, ಎಂದು ಹೇಳಿದನು. ರಮೇಶನು ಇದಾವುದನ್ನೂ ಸ್ವೀಕಾರಮಾಡಲಿಲ್ಲ. ಸ್ವಲ್ಪ ಕಾಲಾನಂತರ ರಮೇಶನು ಹರವಲ್ಲಭನಿಂದ ಅಪ್ಪಣೆ ತೆಗೆದುಕೊಂಡು ಚಂದ್ರನಾಥನೊಡನೆ ತನ್ನ ಊರಿಗೆ ಹಿಂದಿರುಗಿದನು. ರಮೇಶನು ಹರವಲ್ಲಭನ ಮನೆಗೆ ಬಂದು ವಿವಾಹ ವಿಚಾರವಾಗಿ ಮಾತನಾಡಿದುದನ್ನು ನೋಡಿ, ಹರವಲ್ಲಭನ ಮಗನಾದ ಉಪೇಂದ್ರ ನಾರಾಯಣನಿಗೆ ರಮೇಶನ ಮಗಳಾದ ಶೋಭನೆಯನ್ನು ಕೊಟ್ಟು ವಿವಾಹವು ಬಳೆಯುವುದೆಂದು ಜನಗಳಲ್ಲಿ ವಾರ್ತೆಯು ಹರಡಿಕೊಳ್ಳುತಿದ್ದಿತು.

---

## ಹನ್ನೊಂದನೆಯ ಪರಿಚ್ಛೇದ

ಕ್ರಮವಾಗಿ ವಿವಾಹದ ಸಂಗತಿಯು ಉಪೇಂದ್ರನಾರಾಯಣನಿಗೆ ಗೊತ್ತಾಯಿತು. ಅವನ ಬಂಧು ಮಿತ್ರರೆಲ್ಲರಿಗೂ ಗೊತ್ತಾಯಿತು. ಇಷ್ಟಕ್ಕೇನೇ ಎಲ್ಲರೂ ಆನಂದಸಾಗರದಲ್ಲಿ ತೇಲಿ ಮುಳುಗಲಾರಂಭಿಸಿದರು. ಅನೇಕ ಜನ ಸ್ನೇಹಿತರು ತಮ್ಮ ಸಂತೋಷಾತಿಶಯವನ್ನು ತಿಳಿಯಪಡಿಸುವುದಕ್ಕೋಸ್ಕರ ಉಪೇಂದ್ರನಾರಾಯಣನ ಬಳಿಗೆ ಬರುವುದಕ್ಕೆ ಆರಂಭಮಾಡಿದರು. ಸ್ನೇಹಿತರಲ್ಲೊಬ್ಬನು ಉಪೇಂದ್ರನನ್ನು ಕುರಿತು—ಮಿತ್ರನೆ! ನಿನಗೊಬ್ಬ ಒಳ್ಳೆಯ ಹೆಂಡಿತಿ ಸಿಕ್ಕಿದ ಹಾಗಾಯಿತು. ಮುಂದೆ ಸಂಸಾರಸುಖದಲ್ಲಿ ಮಗ್ನನಾಗಿ ನಮ್ಮೆಲ್ಲರನ್ನೂ ಮರೆತು ಬಿಡುವೆ. ನಮ್ಮಲ್ಲಿ ವಿಶ್ವಾಸವೂ ಕಡಮೆಯಾಗಿ ಹೋಗುವುದು. ಆದರೂ ಚಿಂತೆಯಿಲ್ಲ. ನೀನು ಯಾವಾಗಲೂ ಸುಖವಾಗಿರುವುದೇ ನಮಗೆ ಮುಖ್ಯವಾಗಿ ಬೇಕಾದುದು, ಎಂದು ಪರಿಹಾಸಮಾಡಿದನು. ಯಾವ ಸ್ನೇಹಿತನ ಬಾಯಲ್ಲಿ ನೋಡಿದರೂ ಮದುವೆಯ ಮಾತು. ಶೋಭನೆಯ ಸೌಂದರ್ಯವರ್ಣನೆ. ಇದನ್ನು ಕೇಳಿದಾಗಲೆಲ್ಲ ಉಪೇಂದ್ರನ ಆನಂದಕ್ಕೆ ಪಾರವೇ ಇರುತಿರಲಿಲ್ಲ. ಇಂತಹ ಆನಂದಮಧ್ಯದಲ್ಲಿ ಸುರಾಪಾನವಿಲ್ಲದ ಮೇಲೆ ಆನಂದವು ಪೂರ್ಣತೆಯನ್ನು ಹೊಂದಲಾರದೆಂದೆಣಿಸಿ, ಉಪೇಂದ್ರನು ಸುರೆಯನ್ನು ತರಲು ಭೃತ್ಯರಿಗೆ ಅಪ್ಪಣೆಯನ್ನು ಮಾಡಿದನು. ಸುರೆಯು ಕೊಡಕೊಡಗಳಲ್ಲಿ ಬರಲಾರಂಭಿಸಿತು. ಅಲ್ಲಿದ್ದವರೆಲ್ಲರೂ ಸಿದ್ಧರಾದರು. ಕೊಡಗಳಲ್ಲಿದ್ದ ಸುರೆಯು ಸಣ್ಣಪಾತ್ರೆಗಳಲ್ಲಿಳಿದು ಕ್ರಮವಾಗಿ ಜನಗಳ ಉದರವನ್ನು ಪ್ರವೇಶಮಾಡಿತು. ಸ್ವಲ್ಪ ಕಾಲದಲ್ಲಿಯೇ ಜನಗಳೆಲ್ಲರೂ ಕಂಠಪೂರ್ತಿಯಾಗಿ ಪಾನಮಾಡಿ ಬ್ರಹ್ಮಸಾಕ್ಷಾತ್ಕಾರವನ್ನಿದಿರುನೋಡುತಲಿದ್ದರು. ಉಪೇಂದ್ರನಾರಾಯಣನು ಕೂಡ ಗೊತ್ತು ಗುರಿಯಿಲ್ಲದೆ ಕುಡಿದನು. ಬೇಕು ಬೇಕಾದಷ್ಟು ಕುಡಿಯುವುದಕ್ಕೆ ಯಾರ ಅಡ್ಡಿಯೇನೂ ಇರಲಿಲ್ಲ. ವಿಶೇಷವಾಗಿ ಕುಡಿದುದರಿಂದ ಉಪೇಂದ್ರನಿಗೆ ಮದವೇರಿತು. ಎಲ್ಲರೂ ಮತ್ತರಾಗಿ ಹುಚ್ಚು ಹುಚ್ಚಾಗಿ ಕುಣಿಯುತಲಿರುವರು. ಕೆಲವರು ಹಾಡು ಹೇಳತೊಡಗಿದರು. ಮತ್ತೆ ಕೆಲವರು ಅಸ್ಪಷ್ಟ

ವಾಗಿ ಮಾತನಾಡುತಲಿರುವರು. ಒಬ್ಬರಿಗೊಬ್ಬರು ಹೊಡೆದಾಡುವುದಕ್ಕೆ ಪ್ರಾರಂಭ ಮಾಡಿದರು. ಇನ್ನು ಕೆಲವರು ಅಲ್ಲಲ್ಲಿ ಬಿದ್ದು ಮತ್ತೆ ಏಳಲು ಯತ್ನಮಾಡುತ ಲಿರುವರು. ಈ ಸಮಾಜವು ನೋಟಕರಿಗೆ ಬಹಳ ವಿಚಿತ್ರವಾಗಿ ಕಂಡು ಬರುತ ಲಿದ್ದಿತು. ಪ್ರಪಂಚದಲ್ಲಿನ ಅವ್ಯವಸ್ಥೆಯೆಲ್ಲವನ್ನೂ ಏಕತ್ರ ಸೇರಿಸಿದರೆ ಯಾವ ರೀತಿಯಾಗಿ ಕಂಡು ಬರುವುದೋ, ಈ ಸಮಾಜವೂ ಅದೇ ರೀತಿಯಲ್ಲಿದ್ದಿತು. ಈ ವೈಭವದ ಮಧ್ಯದಲ್ಲಿ ಉಪೇಂದ್ರನಿಗೆ ಶೋಭನೆಯ ರೂಪರೇಖಾಲಾವಣ್ಯಗಳು ಜ್ಞಾಪಕಕ್ಕೆ ಬಂದುವು. ಎಲ್ಲಾ ಕೆಲಸಗಳಲ್ಲಿಯೂ ತನಗೆ ಸಹಾಯನಾದ ರಾಧಾ ನಾಥನು ಇಂತಹ ಸಂದರ್ಭದಲ್ಲಿ ಹತ್ತಿರ ಇಲ್ಲದಿರುವುದನ್ನು ನೋಡಿ, ಉಪೇಂ ದ್ರನು ರಾಧಾನಾಥನಿಗೆ ಹೇಳಿ ಕಳುಹಿಸಿದನು. ಕೂಡಲೆ ರಾಧಾನಾಥನು ಬಂದನು. ಎಲ್ಲರೂ ಸುರಾದೇವಿಯನ್ನು ಅರ್ಚನೆ ಮಾಡುತಲಿದ್ದುದನ್ನು ನೋಡಿ ತಾನೂ ಪೂಜೆಗೆ ಸನ್ನದ್ಧನಾದನು. ಪೂಜಾದ್ರವ್ಯಗಳು ಸಿದ್ಧವಾದುವು. ಮತ್ತೆ ಉಪೇಂ ದ್ರನು ಮಿತ್ರನಾದ ರಾಧಾನಾಥನೊಡನೆ ಮನದಣಿಯೆ ದೇವತಾರಾಧನೆಯನ್ನು ಮಾಡಿದನು. ಪೂಜಾಫಲವು ಸಿದ್ಧಿಸಿ ದೇವತೆಯು ಪ್ರಸನ್ನೆಯಾದಳು. ಇಬ್ಬರೂ ಸುರಾಪಾನದಿಂದ ಮತ್ತರಾಗಿ ಮನಬಂದಂತೆ ಕುಣಿದಾಡಲಾರಂಭಿಸಿದರು.

ಈ ದಿನ ಉಪೇಂದ್ರನ ಸಂತೋಷಕ್ಕೆ ಪಾರವೇ ಇರಲಿಲ್ಲ. ಸಂತೋಷವು ಅವನ ಸಣ್ಣ ಹೃದಯದಲ್ಲಿ ಅಡಗಿರಲಾರದೇ ಹೊರಗೆ ಉಕ್ಕಿ ಬರುತಲಿದ್ದಿತು. ಪರ್ವಕಾಲಗಳಲ್ಲಿ ಸಮುದ್ರವು ಹೇಗೆ ಉಕ್ಕುವುದೋ, ಹಾಗೆಯೇ ಇವನ ಸಂತೋ ಷವೂ ಉಕ್ಕುತಲಿತ್ತೆಂದು ಹೇಳುವುದಾದರೆ, ಆ ಸಂತೋಷಕ್ಕೆ ನ್ಯೂನತೆ ಯನ್ನುಂಟುಮಾಡಿದಂತಾಗುವುದು ಅನಿರ್ವಚನೀಯವಾದ ಇಂತಹ ಸಂತೋಷ ವನ್ನು ಅನುಭವಿಸುವ ಪುಣ್ಯಾತ್ಮರಾರಾದರೂ ಇದ್ದರೆ, ಅಂತಹವರಿಗೆ ಮಾತ್ರವೇ, ಉಪೇಂದ್ರನು ಎಷ್ಟರ ಮಟ್ಟಿಗೆ ಸಂತೋಷಪಟ್ಟಿರಬಹುದೆಂಬುದು ಗೊತ್ತಾಗ ಬಹುದು. ಕೇವಲ ಗ್ರಂಥಕರ್ತರ ರಚನಾಕೌಶಲದಿಂದ ಉಪೇಂದ್ರನ ಸಂತೋ ಷವು ವರ್ಣಿಸಲಸದಳವು.

ರಾಧಾನಾಥನು ಉಪೇಂದ್ರನಿಗೆ ಮದುವೆಯೆಂದು ತಿಳಿದಿದ್ದನು. ಅದಕ್ಕಾ ಗಿಯೇ ಉಪೇಂದ್ರನು ಆನಂದಪರವಶನಾಗಿ ಇಷ್ಟೆಲ್ಲಾ ನಡೆಯಿಸುತ್ತಿರುವನೆಂದು ತಿಳಿದು, ಉಪೇಂದ್ರನನ್ನು ಕುರಿತು—ಉಪೇ! ಎಷ್ಟು ಕುಡಿದರೂ ತೃಪ್ತಿಯೇ ಆಗುವುದಿಲ್ಲ. ನನಗೆ ಮತ್ತಷ್ಟು ಮದ್ಯವನ್ನು ಕೊಡು; ಇದು ಸಂತೋಷದ ದಿನ. ನಾವೆಲ್ಲರೂ ಸಂತೋಷವಾಗಿರಬೇಕು. ಅಣ್ಣ! ನಿನಗೆ ಇನ್ನೂ ಮದುವೆಯಾಗದೆ ಎಷ್ಟು ಕಷ್ಟಪಡುತಲಿರುವೆ! ನೀನು ಕಷ್ಟಪಡುವುದಾದರೆ ನಮ್ಮೆಲ್ಲರಿಗೂ ಬಹು

ಸಂಕಟವಾಗುವುದು. ಉರ್ವೇ! ಮತ್ತೊಂದು ಲೋಟ ಮದ್ಯವನ್ನು ಕೊಡು. ಎಷ್ಟು ಕುಡಿದರೂ ಇನ್ನೂ ಕುಡಿಯಬೇಕೆಂದು ಮನವು ಬಯಸುವುದು, ಎಂದನು.

ಉಪೇಂದ್ರ—ರೇಥೊ! ನನಗೆ ಬೇಕಾದಷ್ಟು ಹಣವಿರುವುದು. ದಾಸ ದಾಸಿಯರಿಗೇನೂ ಕೊರತೆಯಿಲ್ಲ. ನೀನು ಬೇಕಾದಷ್ಟು ಮದ್ಯವನ್ನು ಕುಡಿ. ಮುಖ್ಯವಾಗಿ ನೀನು ಸಂತೋಷದಿಂದಿರುವುದೇ ನನಗೆ ಬೇಕಾದುದು. ನೀನು ವ್ಯಸನಪಟ್ಟು ಕೊಂಡರೆ ನನ್ನ ಪ್ರಾಣವೇ ಹೋದಂತಾಗುವುದು. ನನ್ನ ಮದುವೆಯ ವಿಷಯ ಹಾಗಿರಲಿ. ನೀನು ಮದ್ಯವನ್ನು ಕುಡಿ.

ರಾಧಾ—ಉರ್ವೇ! ಮದ್ಯಕ್ಕೇನೋ ಕಮ್ಮಿಯಿಲ್ಲ. ನಾವುಗಳಾರೂ ಹಿಂಜರಿಯುವ ಥಾಗಿಲ್ಲ. ನೀನು ಹೇಳಿದರೂ ಸರಿ, ಹೇಳದಿದ್ದರೂ ಸರಿ. ನಾವೇನೋ ಸುರೆಯನ್ನು ಕುಡಿದೇ ಕುಡಿಯುವೆವು. ಆ ವಿಷಯ ವಂತಿರಲಿ. ನಿನಗೆ ಮದುವೆ ಯಾವಾಗ ?

ಉಪೇಂದ್ರ—ರೇಥೊ! ನೀನು ಚೆನ್ನಾಗಿ ಕುಡಿದುಬಿಟ್ಟು ಮತ್ತನಾಗಿ ಸಂತೋಷವಾಗಿರುವೆ. ನನ್ನನ್ನು ಹಾಸ್ಯಮಾಡುವುದಕ್ಕೆ ಒಳ್ಳೆಯ ಸಮಯವನ್ನು ಹುಡುಕಿದೆ. ನನ್ನ ವ್ಯಸನ ನನಗೆ. ನನ್ನ ಅವಸ್ಥೆಯು ಯಾರಿಗೆ ತಾನೇ ಗೊತ್ತಾದೀತು ?

ರಾಧಾ—ಅಂತಹುದು ನಿನಗೇನು ತಾನೆ ಬಂದಿರುವುದು ? ನಿನಗೆ ವ್ಯಸನವೆ ! ಮತ್ತಷ್ಟು ಮದ್ಯವನ್ನು ಕುಡಿ. ವ್ಯಸನವೆಲ್ಲವೂ ಎಲ್ಲಿಯೋ ಓಡಿ ಹೋಗುವುದು. ನಾನಿರುವಾಗ ನಿನಗೆ ವ್ಯಸನವೆಂದರೇನು ?

ಉಪೇಂದ್ರ—ಆಕಂಠ ಪೂರ್ತಿಯಾಗಿ ಕುಡಿದಿರುವೆನು. ಅದರಲ್ಲೇನೂ ಉಳಿದಿಲ್ಲ.

ರಾಧಾ—ಇಲ್ಲ, ನೀನು ಹಾಗೆ ಕುಡಿದಿದ್ದರೆ ವ್ಯಸನವೆಲ್ಲಿ ಬರುತ್ತಿತ್ತು ? ನೀನು ಖಂಡಿತವಾಗಿಯೂ ಕುಡಿಯಲಿಲ್ಲ. ನಡೆ, ಮನಃಪೂರ್ತಿಯಾಗಿ ಕುಡಿದು ಬಿಡೋಣ.

ಎಂದು ಇಬ್ಬರೂ ಮತ್ತೆ ಕುಡಿಯಲು ಮೊದಲು ಮಾಡಿದರು. ಸುರೆಯು ಇವರ ಅತ್ಯಾಚಾರವನ್ನು ಎಷ್ಟು ತಾನೇ ಸಹಿಸಿಯಾಳು? ಇವರಿಬ್ಬರಿಗೂ ಮದವೇರಿತು, ಜ್ಞಾನವು ತಪ್ಪುತ್ತಾ ಬಂದಿತು. ಬಾಯಲ್ಲಿ ಗೊತ್ತು ಗುರಿಯಿಲ್ಲದ ಮಾತುಗಳು ಅಸ್ಪಷ್ಟವಾಗಿ ಹೊರಡಲಾರಂಭವಾಯಿತು. ರಾಧಾನಾಥನು ಉಪೇಂದ್ರನನ್ನು ನೋಡಿ-ಅಯ್ಯಾ ಮಿತ್ರನೆ ! ಮನೆಯಲ್ಲಿ ಖಂಡಿತವಾಗಿಯೂ ಮುದುಕರಿರಕೂಡದು.

ಅವರಿದ್ದರೆ ನಮ್ಮ ಸುಖಕ್ಕೆ ಬಹಳ ಕುಂದಕ. ನಾವು ಮಾಡುವ ಕೆಲಸಗಳು ಅವರಿಗೆ ಸರಿಬೀಳದೆ, ನಮ್ಮನ್ನು ಪದೇಪದೇ ಮುಳ್ಳಿನಂತೆ ಚುಚ್ಚುತ್ತಲಿರುವರು. ಇದೂ ಅಲ್ಲದೆ ಹಣಕಾಸುಗಳನ್ನು ನಮ್ಮ ಸ್ವಾಧೀನಮಾಡುವುದಿಲ್ಲ. ನಾವು ಯೌವನದಲ್ಲಿ ಸುಖಪಡದಿದ್ದರೆ ಮತ್ತಾವಾಗ ಸುಖಪಡಲಾದೀತು? ಈಗ ನೋಡು, ನಮ್ಮ ಹತ್ತಿರವೇ ಬೇಕಾದ ಹಾಗೆ ದುಡ್ಡಿದ್ದರೆ, ಇನ್ನೆಷ್ಟು ಮದ್ಯವನ್ನು ತಾನೆ ಕುಡಿಯಲಾರದವರಾಗಿದ್ದೆವು. ನಾವು ಇಷ್ಟು ಸ್ವೇಚ್ಛಾವಿಹಾರ ಮಾಡುತಿದ್ದರೂ, ಆ ಹಾಳು ಮುದುಕರಿರುವುದರಿಂದ ನಮಗೆ ಯಾವುದೂ ತೃಪ್ತಿಕರವಾಗಿಯೇ ಕಾಣುವುದಿಲ್ಲ, ಎಂದನು.

ಹೀಗೆಂದು ಮನಬಂದಂತೆ ಮಾತನಾಡುತ್ತಾ, ರಾಧಾನಾಥನೂ, ಉಪೇಂದ್ರನೂ ಉದ್ಯಾನದಲ್ಲಿ ಅತ್ತಿತ್ತ ತಿರುಗಾಡಲಾರಂಭಿಸಿದರು. ಬಂದಿದ್ದವರೆಲ್ಲರೂ ಸುರಾಪಾನ ಮತ್ತರಾಗಿ ತಂತಮ್ಮ ಪ್ರಿಯರೊಡನೆ ಸರಸ ಸಲ್ಲಾಪಗಳನ್ನು ಮಾಡುತ್ತಾ ಯಥಾ ಯಥಾ ತೆರಳಿದರು.

---

## ಹನ್ನೆರಡನೆಯ ಪರಿಚ್ಛೇದ

ಇಂದು ವೈಶಾಖಮಾಸದ ಪೂರ್ಣಿಮಾ. ಆಕಾಶದಲ್ಲಿ ಪೂರ್ಣಚಂದ್ರನು ತನ್ನ ಷೋಡಶಕಲಾಪೂರ್ಣವಾದ ಸೌಂದರ್ಯದಿಂದ ಪೃಥಿವಿಯನ್ನು ಮುಗ್ಧವಾಗಿ ಮಾಡುತಲಿರುವನು. ವೃಕ್ಷಗಳ ನವಪಲ್ಲವಗಳು ಆ ಸೌಂದರ್ಯವನ್ನು ಹೃದಯದಲ್ಲಿ ಧಾರಣಮಾಡಿ ಆನಂದದಿಂದ ಥಳಥಳಿಸುತ್ತಿರುವುವು. ಕೆಲವು ಹೋ, ಹೋ ಶಬ್ದವನ್ನು ಮಾಡುತ್ತಾ ನಗುತಲಿರುವುವು. ಮತ್ತೆ ಕೆಲವು ಕೈತಪ್ಪಳೆಯನ್ನು ಹಾಕಿಕೊಂಡು ನರ್ತನಮಾಡುವಂತೆ ಕಾಣಿಸಿಕೊಳ್ಳುತ್ತಿದ್ದುವು. ಆಹಾ! ತಡೆಯಿಲ್ಲದೆ ಪ್ರಸರಿಸಿರುವ ಚಂದ್ರಿಕೆಯು ಎಷ್ಟು ಮಧುರವಾಗಿಯೂ ಎಷ್ಟು ಮನೋಹರವಾಗಿಯೂ ಇರುವುದು! ಎಲ್ಲಿ ಎಲ್ಲರೂ ಆಮೋದದಲ್ಲಿ ಮೈಮರೆತು ತಪ್ಪು ಹಜ್ಜೆಗಳನ್ನಿಡುತ್ತಾ ಸಂಚರಿಸುತ್ತಲಿರುವರೋ, ಅಲ್ಲಿ ಅತಿ ಚಂಚಲ ಸ್ವಭಾವವುಳ್ಳ ವಾಯುವು ಸುಮ್ಮನಿರುವುದೆಂದರೇನು? ವಾಯುವು ಕೂಡ ಮತ್ತರಂತೆ ಮದಿಸಿ ಕಲ ಮಧುರವಾದ ಧ್ವನಿಯನ್ನು ಮಾಡುತ್ತಾ, ಗಿಡ ಮರಗಳಲ್ಲಿ ಎಡವಿ, ಕಲ್ಲು ಗುಂಡುಗಳಲ್ಲಿ ಮುಗ್ಗರಿಸಿ, ಜನಗಳ ಮೇಲೆ ಬಿದ್ದು ಏಳುತ್ತಾ ಎಲ್ಲಿಯೋ ಓಡಿಹೋಗುತ್ತಲಿದ್ದಿತು. ಅಲ್ಲಲ್ಲಿ ವಾತಪೋತಗಳು ನವಪಲ್ಲವಗಳ ಮೇಲೆ ಬೀಳುತ್ತಲೂ, ಹಚ್ಚಗಿರುವ ಹುಲ್ಲುಗಳ ಮೇಲೆ ಹೊರಳಾಡುತ್ತಲೂ, ಕಾಲವನ್ನು ಕಳೆಯುತ್ತಿದ್ದುವು. ಮಲ್ಲಿಗೆಯು ಸಂಧ್ಯಾಕಾಲದಲ್ಲಿ ಮನೆಗೆ ಬಂದ ವಾಯುವನ್ನು ಅನುರಾಗದಿಂದ ಸತ್ಕರಿಸಿ, ಅವನ ಅಂ

ಗಾಂಗಗಳಿಗೆಲ್ಲಾ ಗಂಧಲೇಪನ ಮಾಡಿದಳು. ಅವನ ಚರಣಪ್ರಾಂತದಲ್ಲಿ ಹೂಗಳನ್ನು ಚೆಲ್ಲಿದಳು. ಅವನೊಡನೆ ಮತ್ತೆ ಮತ್ತೆ ವಿಹರಿಸಿ ಸೋತುಹೋದಳು. ಕಾಮಿನಿಯರು ಪುರುಷರಿಗಾಗಿ ಏನೇನನ್ನು ಸಮರ್ಪಿಸಬೇಕೆಂದು ಉತ್ಸಾಹಪರರಾಗುವರೋ, ಅದೆಲ್ಲವನ್ನೂ ಕೊಟ್ಟುದಾಯಿತು. ಆದರೆ ನಿಷ್ಠುರನಾದ ಮಾರುತನು ಅವಳಲ್ಲಿ ಕ್ಷಣಕಾಲವೂ ನಿಲ್ಲದೇ ಒಂದು ಮಾತನ್ನೂ ಆಡದೆ ಹೊರಟೇ ಹೋದನು. ಮಲ್ಲಿಗೆಯು ಎಷ್ಟೋ ಕರೆದಳು, ಎಷ್ಟೋ ಮಧುರವಾಗಿ ನಕ್ಕಳು, ಎಷ್ಟೆಷ್ಟೋ ವಿನಯದಿಂದ ಅಂಗಲಾಚಿ ಬೇಡಿಕೊಂಡಳು. ಆದರೂ ವಾಯುವಿಗೆ ದಯವೇ ಬರಲಿಲ್ಲ. ವಾಯುವಾದರೋ, ಸಂಪಗೆಯ ಸುವರ್ಣಚ್ಛಾಯೆಯನ್ನು ನೋಡಿ, ರೂಪದಲ್ಲಿ ಮುಗ್ಧನಾಗಿ, ಆಕೆಯಿದ್ದೆಡೆಗೆ ಮೆಲ್ಲ ಮೆಲ್ಲನೆ ಹೋದನು. ಅಲ್ಲಿ ಪ್ರೇಮದಿಂದ ಸಂಪಗೆಯನ್ನು ಮುತ್ತಿಟ್ಟುಕೊಂಡನು. ವಾಯುವಿನ ಚುಂಬನಮಾತ್ರದಿಂದಲೇ ಸಂಪಗೆಯು ಚಕಿತಳಾದಳು. ಆದರೆ ಮಲ್ಲಿಗೆಯಂತೆ ತನ್ನ ಸರ್ವಸ್ವವನ್ನೂ ವಾಯುವಿನ ಪಾದತಳದಲ್ಲಿ ಸಮರ್ಪಣೆಮಾಡಲಿಲ್ಲ. ವಾಯುವು ಒಬ್ಬ ರಸಿಕನಾದ ನಾಯಕನು. ತನ್ನ ಅಂಗಾಂಗಗಳಲ್ಲಿಯೂ ಸುಗಂಧವು ಲೇಪಿತವಾಗಿರುವುದನ್ನು ಮತ್ತೊಬ್ಬ ನಾಯಿಕೆಯು ಕಂಡರೆ ಬಹುಪ್ರಮಾದವುಂಟಾಗುವುದೆಂಬ ಭಯದಿಂದ ಬೇಗ ಬೇಗನೆ ನಿರ್ಮಲೋದಕವುಳ್ಳ ಸರೋವರಗಳಲ್ಲಿ ಪ್ರವೇಶಿಸಿ ವಿಧ ವಿಧವಾಗಿ ವಿಹಾರ ಮಾಡಲು ಹೊರಟೇ ಹೋದನು.

ಪೂರ್ಣಿಮಾ ಪೂರ್ಣಚಂದ್ರನು ತನ್ನ ಪೂರ್ಣವಾದ ಕಳೆಗಳಿಂದ ಭೂಭಾಗವನ್ನು ಪೂರ್ಣಮಾಡುತ್ತಿರಲು, ಮಂದಮಾರುತದಿಂದ ಆಂದೋಳಿತವಾದ ವೃಕ್ಷಗಳ ಶಾಖೆಯಲ್ಲಿ ಕೋಗಿಲೆಯೊಂದು ಕುಳಿತು "ಕುಹೂ" ಎಂದು ಧ್ವನಿಮಾಡುತಲಿತ್ತು. ಕೋಗಿಲೆಯು ಏಕಾಕಿಯಾಗಿ ಕುಳಿತು ಏತಕ್ಕೆ ಹಾಗೆ ಧ್ವನಿಮಾಡುತಲಿತ್ತೋ, ಅದನ್ನು ನಾವು ಅರಿಯೆವು. ಕೋಗಿಲೆಯಾದರೋ "ಕುಹೂ" "ಕುಹೂ" ಎಂದು ಕೂಗೇ ಕೂಗುವುದು, ಒಂದಾವೃತ್ತಿ, ಎರಡಾವೃತ್ತಿ, ಮೂರಾವೃತ್ತಿ ಕೂಗಿಕೊಂಡಿತು. ನಿಶ್ಶಬ್ದವಾಗಿದ್ದ ಆ ರಾತ್ರಿಯಲ್ಲಿ, ಕೋಗಿಲೆಯ ಕಂಠಸ್ವರವು ಆಕಾಶವನ್ನು ಭೇದಿಸಿಕೊಂಡು ಎಲ್ಲೆಲ್ಲಿಯೂ ವ್ಯಾಪಿಸಿತು. ಆ ಧ್ವನಿಯು ವಾಯುವಿನಲ್ಲಿ ಎಲ್ಲಿಯ ವರೆಗೂ ವ್ಯಾಪನಶೀಲವಾಗಿದ್ದಿತೋ, ಅಲ್ಲಿಯ ವರೆಗೂ ಇದ್ದ ಜನಗಳ ಅಂತರಂಗದಲ್ಲಿ ಎಂತಹ ಭಾವವು ಆವಿರ್ಭವಿಸಿತೆಂಬುದನ್ನು ತಿಳಿದು ಹೇಳುವುದಕ್ಕಾಗುವುದಿಲ್ಲ. ರಸಮಯವಾದ ಸಮಯದಲ್ಲಿ ತನ್ನ ಪ್ರಾಣಕಾಂತನನ್ನಗಲಿದ ರಮಣೀಮಣಿಯು ವಿರಹವೇದನೆಯಿಂದ ನಿದ್ರೆಬಾರದೆ ಹಾಸಿಗೆಯಲ್ಲಿ ಹೀಗೆ ಹಾಗೆ ಹೊರಳಾಡುತ್ತಿರುವಾಗ ಕೋಕಿಲೆಯ ಕಂಠಸ್ವರವು ಅವಳ ಹೃದಯದಲ್ಲಿ ಯಾವ ಭಾವವನ್ನು ಉದ್ಬೋಧಿಸುವುದೋ, ಅದನ್ನು ಯಾರು ಬಲ್ಲರು? ವಾಸಕ ಸಜ್ಜಿಕೆಯರು ಸಾಯಂಕಾಲದ ಗೃಹಕೃತ್ಯಗಳನ್ನೆಲ್ಲಾ ಮುಗಿಸಿ

ಕೊಂಡು ತಲೆಬಾಗಿಲಿನಲ್ಲಿ ನಿಂತು ಪ್ರತಿಕ್ಷಣವೂ ಪ್ರಿಯನ ನಿರೀಕ್ಷಣೆಯಲ್ಲಿ "ಪ್ರಿಯನು ಇನ್ನೂ ಬರಲಿಲ್ಲವಲ್ಲ. ಸಾವಕಾಶವಾದರೆ ಈ ಪ್ರಾಣವು ಹೇಗೆ ತಾನೆ ಉಳಿದೀತು" ಎಂದು ತತ್ತರಪಡುತ್ತಿರುವಾಗ, ಕುಹೂ ಶಬ್ದವು ಕಿವಿಯಲ್ಲಿ ಬಿದ್ದರೆ, ಅವರ ಪ್ರೇಮತಂತ್ರಿಯು ಎಷ್ಟು ವೇಗವಾಗಿ ಕಂಪಿತವಾಗುವುದೋ ಅದನ್ನು ಯಾರು ಬಲ್ಲರು? ಸ್ವಾಮಿಯು ದೀರ್ಘಕಾಲ ದೇಶಾಂತರಗಮನಮಾಡಿರುವನೆಂದು ಆಹಾರವಿಹಾರಗಳಲ್ಲಿ ಮನವೊಡಂಬಡದೆ ಪ್ರೋಷಿತ ಭರ್ತೃಕೆಯು, ಮಲಿನಾಂಬರ ಧಾರಿಣಿಯಾಗಿ ಕೈಯಲ್ಲಿ ತಲೆಯನ್ನಿಟ್ಟು ಅನ್ಯಮನಸ್ಕಳಾಗಿ ಕುಳಿತಿರುವಾಗ,' ಕೋಗಿಲೆಯು ಮನಗರಗುವಂತೆ ಪಂಚಮವನ್ನು ಗಾನಮಾಡುವುದಾದರೆ, "ಉಸ್" ಎಂದು ದೀರ್ಘನಿಶ್ವಾಸವನ್ನು ಬಿಡುವ ಅವಳ ಶೂನ್ಯಾಂತರಂಗದಲ್ಲಿ ಹುಟ್ಟುವ ಅನಿರ್ವಚನೀಯವಾದ ಭಾವವನ್ನು ಯಾರು ಊಹಿಸಬಲ್ಲರು? ಇದಾವುದೂ ನಮಗೆ ಗೊತ್ತಾಗುವುದಿಲ್ಲ. ಹುಟ್ಟಿದ ಮೊದಲು ಸ್ಮರೋತ್ಪತ್ತಿಯ ವರೆಗೂ, ಯಾವ ನಮ್ಮ ಹೃದಯವು ಮರುಭೂಮಿಯಾಗಿ ಪರಿಣಮಿಸಿತೋ, ಅಂತಹ ಹೃದಯದಲ್ಲಿ ಭಾವಾವಿರ್ಭಾವ ವೆಂದರೇನು? ಲೋಕದೊಳಗೆ ಸಹಾನುಭೂತಿಯುಳ್ಳವರಾರಾದರೂ ನಮ್ಮ ಸ್ತ್ರೀಪುರುಷಪಾಠಕರಲ್ಲಿರುವುದಾದರೆ, ಅಂತಹವರನ್ನು ವಿನಯದೊಡನೆ ಕೇಳಿಕೊಳ್ಳುವೆವು. ಕುಹೂ ಧ್ವನಿಯಿಂದ ಎಂತಹ ಭಾವಾವಿರ್ಭಾವವಾಗುವುದೋ ಅದನ್ನು ಅವರೇ ತಂತಮ್ಮಲ್ಲಿ ತಿಳಿದುಕೊಳ್ಳಬಹುದು.

ಹಾಸ್ಯಮಯಿಯಾದ ಪ್ರಕೃತಿಯ ಇಂತಹ ಮನೋಮುಗ್ಧಕರವಾದ ಸೌಂದರ್ಯವನ್ನು ನೋಡಲೋಸುಗ, ಉಪೇಂದ್ರನೂ ರಾಧಾನಾಥನೂ ಈ ರಮಣೀಯವಾದ ಉದ್ಯಾನದ ಕಡೆ ಬರಬೇಕೆಂದು ಬಂದವರಲ್ಲ. ಮೂರು ಲೋಕವನ್ನೂ ಪದತಲದಲ್ಲಿಟ್ಟುಕೊಳ್ಳುವ ಶಕ್ತಿಯುಳ್ಳ ಆ ಸುರಾದೇವಿಯ ಪ್ರಭಾವದಿಂದಲೇ ಅವರು ಇತ್ತಕಡೆ ಹೊರಟು ಬಂದುದು. ಬಂದವರು ಉದ್ಯಾನದಲ್ಲಿ ಸರೋವರದ ಬಳಿ ಇದ್ದ ಒಂದು ಶಿಲಾಸನದ ಮೇಲೆ ಕುಳಿತುಕೊಂಡರು. ಶಿಲಾಸನದ ನಾಲ್ಕು ಪಕ್ಕದಲ್ಲಿಯೂ ವಕುಳವೃಕ್ಷಗಳೂ, ವಕುಳಪುಷ್ಪಗಳೂ ಎಲ್ಲೆಲ್ಲಿಯೂ ಅರಳಿ ಘಮಘಮಿಸುತಲಿರುವವು. ಆ ಸ್ಥಳಕ್ಕೆ ಒಬ್ಬ ಭೃತ್ಯನು ಬಂದು, ಅಲ್ಲಿ ಸುರಾದೇವಿಯನ್ನು ಅರ್ಚನೆ ಮಾಡಲೋಸುಗ ಸಕಲ ಸಂಭಾರಗಳನ್ನೂ ಹವಣಿಸಿಕೊಟ್ಟನು. ಸುರಾಪೂಜೆಗೆ ಮತ್ತೆ ಪ್ರಾರಂಭವಾಯಿತು. ವಾರವನಿತೆಯರಿಲ್ಲದೇ ಸುರಾರ್ಚನೆಯು ಸಾಂಗವಾಗಲಾರದೆಂದೆಣಿಸಿ, ಉಪೇಂದ್ರನು ವಾರಾಂಗನೆಯರೆನ್ನು ಕರೆತರಲು ಭೃತ್ಯನನ್ನು ಕಳುಹಿಸಿದನು. ಭೃತ್ಯನು ಹೊರಟುಹೋದನು. ಇಬ್ಬರೂ ಏನೇನೋ ಮಾತನಾಡತೊಡಗಿದರು. ತಟ್ಟನೆ ಅವರ ಮಾತು ನಿಂತಿತು. ದೂರದಲ್ಲಿ ಮಧುರವಾದ ಕಂಠದಿಂದ ಹೊರಡುತಲಿರುವ ಗಾನವು ಕಿವಿಗೆ ಬಿತ್ತು. ಇಬ್ಬರ ದೃಷ್ಟಿಯೂ, ಆವ ಕಡೆಯಿಂದ ಗಾನವು ನಿಸ್ಸೃತವಾಗುತಲಿತ್ತೊ, ಆ ಕಡೆಗೆ

ತಿರುಗಿತು. ಉಪೇಂದ್ರನು ಆ ಕಂಠಸ್ವರವನ್ನು ಗುರುತಿಸಿ "ನಮ್ಮ ಇಂದಿರೆಯು ಹಾಡುವಂತಿದೆ!" ಎಂದನು. ಇಬ್ಬರೂ ಆದರದಿಂದ ಗಾನವನ್ನು ಕೇಳಿದರು. ಇಂದಿರೆಯು ಹಾಡಿದಳು.

ವದ ಸದುಪಾಯಂ ನಿಪತತಿ ಸಾಯಂ ।
ಪಾಲಯ ಸಖಿ ನಿರಪಾಯಂ ॥

ಕೋಕಿಲ ಕಂಠಿಯಾದ ಇಂದಿರೆಯು ಉದ್ಯಾನದಲ್ಲಿ ಮಧುರವಾಗಿ ಹಾಡುತ್ತ ಉಪೇಂದ್ರನಿದ್ದೆಡೆಗೆ ಬರುತಲಿದ್ದಳು. ಸಂಗೀತವನ್ನು ಕೇಳಿ ರಾಧಾನಾಥನ ಮುಖವು ಅರಳಿತು, ಆದರೆ ಉಪೇಂದ್ರನ ಹೃದಯವು ಇಂದಿರೆಯ ಕಂಠಸ್ವರ ದೊಡನೆ ಕಂಪಿತವಾಯಿತು. ಉಪೇಂದ್ರನು ಅಧೀರನಾಗಿ, "ಸತ್ಯವಾಗಿಯೂ ನಮ್ಮ ಸುಖಕ್ಕೆ ವಿಘ್ನವುಂಟಾದೀತು" ಎಂದು ಎದ್ದು ನಿಂತುಕೊಂಡನು. ಇಂದಿರೆಯ ಗಾನವು ಮತ್ತೆ ಕೇಳಲಾರಂಭಿಸಿತು.

ವದ ಸದುಪಾಯಂ—

ರಮಣಿಯು ಹಾಡುತ ಹಾಡುತ ಉಪೇಂದ್ರನ ಬಳಿಗೆ ಬಂದುಬಿಟ್ಟಳು. ರಾಧಾನಾಥನು ಇಂದಿರೆಯನ್ನು ನೋಡಿ—ನೀನು ಒಳ್ಳೆಯವಳೆಂದು ಇಲ್ಲಿಯ ವರೆಗೂ ತಿಳಿದಿದ್ದೆನು. ನಿನ್ನನ್ನು ನೋಡಿದರೆ ಆ ಭಯವು ಈಗ ಎಲ್ಲಿಯೋ ಹೋಯಿತು. ನೀನೂ ಒಂದಾವೃತ್ತಿ ಸುರಾದೇವಿಯನ್ನು ಪೂಜಿಸು. ನಿನ್ನ ಚಂದ್ರವದನದಲ್ಲಿ ಮದ್ಯವನ್ನು ಸೇವಿಸಿ ನಮ್ಮನ್ನು ಕೃತಾರ್ಥರನ್ನಾಗಿ ಮಾಡು, ಎಂದನು.

ರಾಧಾನಾಥನ ಮಾತನ್ನು ಕೇಳಿ ಇಂದಿರೆಯ ಮುಖಮಂಡಲವು ಕೊಂಚ ಕೆಂಪೇರಿತು. ಆದರೆ ಯಾವ ಮಾತನ್ನೂ ಆಡಲಿಲ್ಲ.

ಇಲ್ಲಿಯ ವರೆಗೂ ಪಾಠಕರಿಗೆ, ನಾವು ಇಂದಿರೆಯ ಪರಿಚಯವನ್ನು ಮಾಡಿಕೊಡಲಿಲ್ಲ. . ಹಾಗೆ ಪರಿಚಯ ಮಾಡಿಕೊಡದೇ ಇರುವುದು ಪ್ರಕೃತ ಕಾಲಕ್ಕೆ ವಿರುದ್ಧವಾದ ಧರ್ಮವಾಗಿದೆ. ಈಗ ನಾವು ಇಂದಿರೆಯ ಪರಿಚಯವನ್ನು ಮಾಡಿಸುವೆವು. ಇಂದಿರೆಯು ಸದ್ವಂಶದಲ್ಲಿ ಉತ್ಪನ್ನೆಯಾದ ಒಬ್ಬ ಕಾಯಸ್ಥಜಾತಿಯ ಕನ್ನೆ. ಕಲಿಕತ್ತೆಗೆ ಸ್ವಲ್ಪ ದೂರದಲ್ಲಿರುವ ಒಂದು ಸಣ್ಣಗ್ರಾಮವು ಅವಳಿಗೆ ತೌರೂರು. ಅವಳಿದ್ದ ಹಳ್ಳಿಯು ಅಷ್ಟು ಪ್ರಸಿದ್ಧವಾಗಿಯೂ ಇರಲಿಲ್ಲ, ಪ್ರಕೃತ ಅದರ ಹೆಸರನ್ನು ತಿಳಿಸಬೇಕಾದ ಅವಶ್ಯಕತೆಯೂ ನಮಗಿರುವುದಿಲ್ಲ. ಇಂದಿರೆಯ ತಂದೆಯು ಒಬ್ಬ ಪುಷ್ಟನಾಗಿದ್ದನು. ಜ್ಞಾತಿವ್ಯವಹಾರದಲ್ಲಿ ಅವನಿಗಿದ್ದ ಆಸ್ತಿಯೆಲ್ಲವೂ ಲಾಯರಿಗೂ ಕೋರ್ಟಿಗೂ ಕೊಟ್ಟದಾಯಿತು. ಅಲ್ಪಸ್ವಲ್ಪ ಉಳಿದ ಹಣವನ್ನೂ ರೋಗನಿವಾರಣೆಗೋಸುಗ ವೈದ್ಯರ ಬಾಯಲ್ಲಿ ಹಾಕಿಬಿಟ್ಟು ಪುರಂದರ

ದಾಸನಾದನು. ರೋಗವು ಪ್ರಬಲವಾಗಿದ್ದುದರಿಂದ ಅವನನ್ನು ಅಕಾಲಮೃತ್ಯುವು ಬಿಡಲಿಲ್ಲ. ತಂದೆಯು ಸಾಯುವಾಗ ಇಂದಿರೆಗೆ ಹನ್ನೆರಡನೆಯ ವರ್ಷವು ತುಂಬುತಲಿದ್ದಿತು. ಸರಿಯಾದ ವರನು ದೊರೆಯದೇ ಹೋದುದರಿಂದಲೇ ಇಂದಿರೆಗೆ ಆಗಿನ ವರೆಗೂ ವಿವಾಹ ವಾಗಿರಲಿಲ್ಲ. ತಂದೆಯು ಮಡಿದನಂತರದಲ್ಲಿ ತಾಯಿಯಾದವಳು ಹುಡುಗಿಯನ್ನು ಕರೆದುಕೊಂಡು ಹೋಗಿ ಒಂದು ಸಣ್ಣ ಗುಡಿಸಿಲಿನಲ್ಲಿ ವಾಸವಾಗಿರುತಿದ್ದಳು.

ರೋಗ, ಶೋಕ, ದಾರಿದ್ರ್ಯ, ದುಃಖ ಮುಂತಾದ ಕಾರಣಗಳಿಂದ ಇಂದಿರೆಯ ದೇಹದಲ್ಲಿ ಕಾಂತಿಯು ಅಳಿಸಿ ಹೋಗಿದ್ದಿತು.

ಇಂದಿರೆಗೆ ವಯಸ್ಸಾಗುತ್ತ ಬಂದಿತು. ಇನ್ನೂ ವಿವಾಹದ ಪ್ರಯತ್ನವೇ ಇಲ್ಲ. ಇದಕ್ಕೆ ಮೊದಲು ಯೋಗ್ಯನಾದ ವರನು ಸಿಕ್ಕದೇ ಇದ್ದುದರಿಂದ ಮದುವೆಯಾಗಿರಲಿಲ್ಲ. ಈಗಾದರೋ, ಹಣವಿಲ್ಲದುದರಿಂದ ಮದುವೆಯಾಗಲಿಲ್ಲ. ಪ್ರಾಪ್ತವಯಸ್ಕಳಾದ ಮಗಳಿಗೆ ಸಕಾಲದಲ್ಲಿ ಮದುವೆಯಾಗದಿರುವುದನ್ನು ಇಂದಿರೆಯ ತಾಯಿಯು ನೋಡಿ ಬಹಳವಾಗಿ ಸಂಕಟಪಡುತಲಿದ್ದಳು. ಜ್ಞಾತಿಗಳಾರಾದರೂ ಈ ದರಿದ್ರಳಿಗೆ ಸಹಾಯಕರಾಗಿ, ಇಂದಿರೆಯ ಮದುವೆಯನ್ನು ಆಯಿತೆನ್ನಿಸಬಹುದಾಗಿತ್ತು. ಆದರೆ ಎಲ್ಲರೂ ಇವಳಲ್ಲಿ ಶತ್ರುತ್ವವನ್ನು ಸಾಧನೆ ಮಾಡತೊಡಗಿದರು. ಒಂದು ವೇಳೆ ಯಾವನಾದರೊಬ್ಬ ವರನು ಸಿಕ್ಕಿದನೆಂದರೆ, ಜ್ಞಾತಿಗಳು ಹೀಯಾಳಿಸಿಬಿಡುವರು. ಮತ್ತೆ ಮದುವೆಯ ಮಾತೇ ಇಲ್ಲದಂತಾಗುವುದು.

ವಿಧವೆಯು ಉಪಾಯ ಹೀನೆಯಾದಳು. ದೊಡ್ಡದಾದ ಹುಡುಗಿಯನ್ನು ಮದುವೆಯಿಲ್ಲದೆ ಮನೆಯಲ್ಲಿಟ್ಟುಕೊಂಡರೆ ಕುಲದಿಂದ ಬಹಿಷ್ಕೃತೆಯಾಗುವ ಭಯ ಬೇರೆ ಮನವನ್ನು ಆವರಿಸಿಕೊಂಡಿತು. ಆದುದರಿಂದ ವಿಧವೆಯು ಆ ಹಳ್ಳಿಯನ್ನು ಬಿಟ್ಟು ಬೇರೆ ಸ್ಥಳಕ್ಕೆ ಹೋಗಿ, ಕೇವಲ ದರಿದ್ರನಾದ—ನಿತ್ಯರೋಗದಿಂದ ಹಾಸಿಗೆ ಹಿಡಿದು ಬಿದ್ದಿರುವ ಒಬ್ಬಾನೊಬ್ಬ ವರನಿಗೆ ಒಂದು ಕಾಸೂ ವೆಚ್ಚವಿಲ್ಲದೇ ಮದುವೆ ಮಾಡಿಬಿಟ್ಟಳು.

ಇಂದಿರೆಗೆ ಮದುವೆಯಾಯಿತು. ಇಂದಿರೆಯು ತನ್ನ ಪತಿಯ ಮನೆಗೆ ಹೊರಟಳು. ಅವಳ ಸ್ವಾಮಿಯಾದರೋ ನಿತ್ಯರೋಗಿ. ಅದೂ ಅಲ್ಲದೆ ಪರಮ ದರಿದ್ರನು. ಇದನ್ನು ನೋಡಿ ಇಂದಿರೆಗೆ ಬಹಳ ವ್ಯಸನವಾಯಿತು. ಮಾಡುವುದೇನು ? ಆಹಾರವನ್ನೂ ನಿದ್ರೆಯನ್ನೂ ಪೂರ್ತಿಯಾಗಿ ಪರಿತ್ಯಾಗಮಾಡಿ ಏಕಭಾವದಿಂದ ತನ್ನ ಸ್ವಾಮಿಯನ್ನೇ ಸೇವಿಸಲುಪಕ್ರಮಿಸಿದಳು. ಪತಿಸೇವೆಯು ಸ್ತ್ರೀಯರಿಗೆ ಏಕಮಾತ್ರವಾದ ಧರ್ಮವೆಂದೂ, ಅದನ್ನು ಮಿಂಚಿದ್ದು ಮತ್ತಾ

ವುದೂ ಇಲ್ಲವೆಂದೂ ತಿಳಿದು, ತನ್ನ ಕಷ್ಟವನ್ನೆಲ್ಲ ತೃಣೀಕರಿಸಿ ರಾತ್ರಿಹಗಲು ಪತಿ ಸೇವೆಯಲ್ಲಿ ನಿರತೆಯಾದಳು. ಕ್ರಮವಾಗಿ ಅವಳ ಶರೀರದಲ್ಲಿ ಆರೋಗ್ಯವು ಕಿಡುತ ಬಂದಿತು. ತನಗೆ ಎಂತಹ ರೋಗ ಬಂದರೂ ಅದನ್ನು ಮನಸ್ಸಿಗೆ ತೆಗೆದುಕೊಳ್ಳದೇ, ಸ್ವಾಮಿಗೆ ಹೇಗಾದರೂ ಆರೋಗ್ಯಲಾಭವುಂಟಾದರೆ ಸಾಕೆಂದು ದೇವರನ್ನು ಪ್ರಾರ್ಥಿಸುತ್ತಾ, ಎಂದಿನಂತೆ ಪತಿ ಶುಶ್ರೂಷೆಯನ್ನು ಮಾಡುತ್ತಿದ್ದಳು.

ಹೀಗಿರಲು, ಇಂದಿರೆಗೆ ಒಂದಾನೊಂದು ದಿನ ರೋಗವು ಪ್ರಾಪ್ತವಾಯಿತು. ಈ ವರ್ತಮಾನವು ಗತ್ವಾಗತ್ವಾ ಅವಳ ತಾಯಿಯ ಕಿವಿಯಲ್ಲಿ ಬಿದ್ದಿತು. ವಿಧವೆಯು ಈ ವರ್ತಮಾನವನ್ನು ಕೇಳಿದಾಕ್ಷಣವೇ, ಸಂಕಟವನ್ನು ತಡೆಯಲಾರದವಳಾಗಿ, ಅಳಿಯನ ಮನೆಗೆ ಬಂದಳು. ತಾಯಿಯ ಪ್ರಯತ್ನದಿಂದ ಇಂದಿರೆಗೆ ರೋಗವು ವಾಸಿಯಾಯಿತು. ಇವರಿಬ್ಬರ ಶುಶ್ರೂಷೆಯಿಂದ ಅಳಿಯನಿಗೆ ಸ್ವಲ್ಪ ಗುಣ ಕಂಡುಬಂದಿತು. ವಿಧವೆಗೆ ರೋಗವು ಪ್ರಾಪ್ತವಾಗಿ, ಆ ರೋಗದಿಂದಲೇ ಆಕೆಯು ದೇಹತ್ಯಾಗ ಮಾಡಬಿಟ್ಟಳು.

ಇದನ್ನು ನೋಡಿ, ಇಂದಿರೆಯ ವ್ಯಸನವು ದ್ವಿಗುಣಿತವಾಯಿತು. ಸಹಿಸಲಸಾಧ್ಯವಾದ ವ್ಯಸನ ಬಂದೊದಗಿದರೂ, ಇಂದಿರೆಯು ಪತಿಯ ಸೇವೆಯಲ್ಲಿ ಮಾತ್ರ ಸ್ವಲ್ಪವೂ ತಾತ್ಸಾರಮಾಡಲಿಲ್ಲ. ಎಷ್ಟು ಮಾಡಿದರೂ ಅವಳ ಗಂಡನ ರೋಗವು ಕಮ್ಮಿಯಾಗಲಿಲ್ಲ. ದಿನೇ ದಿನೇ ರೋಗವು ಹೆಚ್ಚಿ ಯಜಮಾನನು ಹಾಸಿಗೆ ಹತ್ತಿ ಬಿದ್ದನು. ಇಂದಿರೆಯು ಹಗಲಿರುಳೂ ಪತಿಯ ಸೇವೆಯಲ್ಲಿದ್ದುಬಿಟ್ಟಳು. "ಗಂಡನಿಗೆ ಪಥ್ಯಕ್ಕೆ ತಂದುಹಾಕುವವರಾರು? ಮನೆಯಲ್ಲಿ ತಿನ್ನುವುದಕ್ಕೆ ಗತಿಯಿಲ್ಲ. ಬೆಳಗಾದರೆ ಏನುಗತಿ?" ಎಂದು ಇಂದಿರೆಯು ದಿಕ್ಕುತೋರದೆ ಆಲೋಚನೆಯಲ್ಲಿಯೇ ರಾತ್ರಿಯನ್ನು ಕಳೆದು ಬಿಟ್ಟಳು. ಬೆಳಗಾಯಿತು. ಇನ್ನು ಸುಮ್ಮನೆ ಕುಳಿತುಕೊಂಡರೆ ರೋಗಿಯಾದ ಗಂಡನಿಗೆ ಪಥ್ಯಕ್ಕೆ ತಂದು ಹಾಕುವರಾರು? ಇಂದಿರೆಯು ಧೈರ್ಯದಿಂದ ಎದೆಯನ್ನು ಕಲ್ಲು ಮಾಡಿಕೊಂಡು ಎರಡು ಮೂರು ಘಂಟೆಗಳ ಕಾಲ ಹೊರಗೆ ತಿರುಗಿ ಭಿಕ್ಷೆ ಬೇಡಿಕೊಂಡು ಬಂದಲ್ಲದೆ ಜೀವನವು ನಡೆಯಲಾರದೆಂದು ನಿರ್ಧರಮಾಡಿಕೊಂಡಳು. ಇಂದಿರೆಯು ಭಿಕ್ಷಾಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು, ಮೆಲ್ಲಗೆ ಕಾಲನ್ನು ಹೊರಗೆ ತೆಗೆದಿಟ್ಟಳು. ಕಾಲೇ ಬಾರದು. ಇಂದಿರೆಯು ತನ್ನ ಜೀವವನ್ನೆಲ್ಲಾ ಹಿಡಿಯಲ್ಲಿ ಹಿಡಿದುಕೊಂಡು ಭಿಕ್ಷಕ್ಕೆ ಹೊರಟಳು. ಮಾಡುವುದೇನು? ಒಂದು ಮನೆ, ಎರಡು ಮನೆ ಮೂರು ಮನೆ ಭಿಕ್ಷ ಬೇಡಿದುದಾಯಿತು. ಇವಳಲ್ಲಿ ಕನಿಕರವಿಟ್ಟು ಭಿಕ್ಷೆ ಹಾಕುವವರು ಹಾಕಿದರು. ಇಂದಿರೆಯು ಭಿಕ್ಷೆಯಿಂದ ಸಂಪಾದಿಸಿ ತಂದುದನ್ನು ಗಂಡನಿಗೆ ಪಥ್ಯಕ್ಕೆ ಹಾಕಿ, ಅವನನ್ನು ಉಪಚರಿಸಿದಳು. ಮತ್ತಾವ ಪದಾರ್ಥಕ್ಕೂ ಮಾರ್ಗವಿಲ್ಲದುದರಿಂದ, ಅವಳು ಆ ದಿನ

ಉಪವಾಸ ಮಾಡಿದಳು. ಗಂಡನಿಗೆ ಆಗಿ ಮಿಕ್ಕ ದಿವಸ ತಾನೂ ಆಹಾರ ಮಾಡು ವಳು. ಇಲ್ಲದ ದಿವಸ ಉಪವಾಸ ಮಾಡುವಳು. ಇಷ್ಟಾದರೂ ತನ್ನ ಸಂಕಟ ವನ್ನು ಮನಸ್ಸಿಗೆ ಹಚ್ಚಿಕೊಳ್ಳದೇ, ಯಾವಾಗಲೂ ಗಂಡನಿಗೆ ಕ್ಷೇಮವನ್ನೇ ಕೋರುತ್ತಿರುವಳು. ಸ್ತ್ರೀ ಪಾಠಕರುಗಳಿರಾ! ನಿಮ್ಮಲ್ಲಿ ಆರಾದರೂ ಪತಿಯ ಶುಶ್ರೂಷೆಯನ್ನೇ ಅರಿಯದವರಾಗಿದ್ದಲ್ಲಿ, ಇಂದಿರೆಯನ್ನು ಆದರ್ಶಸ್ವರೂಪವನ್ನಾ ಗಿಟ್ಟುಕೊಂಡು ಪತಿವ್ರತಾ ಶಿರೋಮಣಿಗಳೆಂದು ಹೆಸರು ಪಡೆದು ಸುಖವಾಗಿ ಬಾಳಿರಿ. ನೀವು ವಿದ್ಯಾವತಿಯರಾದರೂ, ಪತಿಯ ಶುಶ್ರೂಷೆಯೇ ನಿಮಗೆ ಪರಮ ಸೌಭಾಗ್ಯವು. ಇದರಿಂದ ನಿಮಗೆ ಕುಂದು ಎಂದಿಗೂ ಬರಲಾರದು. ನಾವು ಹೀಗೆ ಹೇಳುತ್ತೇವೆಂದು ನೀವು ನಮ್ಮಲ್ಲಿ ಆಗ್ರಹ ಮಾಡಬೇಡಿರಿ. ನೀವೇ ಆಲೋ ಚಿಸಿ, ಏಕಮನಸ್ಕತೆಯಿಂದ ಪತಿಯನ್ನು ಸೇವಿಸಿನೋಡಿ. ಅದರಿಂದುಂಟಾಗುವ ಸೌಖ್ಯವನ್ನು ನೀವೇ ಅನುಭವಿಸುವಿರಿ. ಅನಂತರ ಅಂತಹ ಸುಖಸ್ವರೂಪವಾದ ಸೇವೆಯನ್ನು ನೀವೆಂದಿಗೂ ಬಿಡಲಾರಿರಿ.

ಇಂದಿರೆಯು ಇದ್ದ ಮನೆಯ ಪಕ್ಕದಲ್ಲಿ ಒಂದು ಮಹಡಿಯ ಮನೆ. ಆ ಮನೆ ಯಲ್ಲಿಯೇ ಉಪೇಂದ್ರನಾರಾಯಣನು ವಾಸವಾಗಿರುತ್ತಿದ್ದನು. ಈ ಕಥೆಯು ನಡೆಯುತ್ತಿರುವ ಕಾಲದಲ್ಲಿ ಉಪೇಂದ್ರನು ಇನ್ನೂ ವಿದ್ಯಾವ್ಯಾಸಂಗ ಮಾಡು ತಿದ್ದನು. ಇಂದಿರೆಯು ಭಿಕ್ಷೆ ಬೇಡುವಳಾಗಿದ್ದರೂ, ಅವಳು ಎಂದಿಗೂ ಈ ದೊಡ್ಡಮನೆಗೆ ಹೋದವಳಲ್ಲ. ಒಬ್ಬ ನೆರೆಮನೆಯ ಹೆಂಗುಸು, ಇವಳು ಭಿಕ್ಷೆ ಬೇಡುವುದನ್ನು ನೋಡಿ, ಇವಳನ್ನು ಕುರಿತು,—ತಾಯಿ! ನೀನು ಯಾಕೆ ಹೀಗೆ ಶ್ರಮಪಡುತ್ತೀಯೆ? ಈ ದೊಡ್ಡ ಮಹಡಿ ಮನೆಯ ಯಜಮಾನನ ಕುವರನು ಬಹಳ ಉದಾರಿಯೆಂದು ಕೇಳಿರುವೆನು. ನೀನು ಅವನ ಬಳಿಗೆ ಹೋಗಿ ನಿನ್ನ ಸಂಕ ಟವನ್ನರುಹಿದರೆ, ಅವನು ಖಂಡಿತವಾಗಿಯೂ ನಿನಗೆ ಉಪಕಾರ ಮಾಡುವನು. ಅದ ರಿಂದ ನಿನ್ನ ಕಷ್ಟವು ತಕ್ಕಮಟ್ಟಿಗೆ ಕಮ್ಮಿಯಾಗುವುದು. ಹಾಗೆ ಮಾಡಬಾರದೇ ನಮ್ಮ! ಎಂದು ಹೇಳಿದಳು. ಇಂದಿರೆಯು ಈ ವಿಷಯವನ್ನು ಮನಸ್ಸಿಗೇ ತಂದು ಕೊಳ್ಳಲಿಲ್ಲ. ಅದಕ್ಕೆ ಕಾರಣವೂ ಇದ್ದಿತು. ಏತಕ್ಕೆಂದರೆ—ತನ್ನ ಅವಸ್ಥೆಯೂ, ತನ್ನ ವಯಸ್ಸೂ, ತನ್ನ ರೂಪವೂ, ತನ್ನ ಯೌವನವೂ, ತನಗೇ ಅನಿಷ್ಟಕಾರಿ ಯೆಂದು ಅವಳು ತಿಳಿದುಕೊಂಡಿದ್ದಳು. ಆದುದರಿಂದ ಯೌವನಸ್ಥನಾದ ಪರ ಪುರುಷನಲ್ಲಿ ಭಿಕ್ಷೆ ಬೇಡುವುದಕ್ಕೆ ಮನವೊಡಂಬಡದೇ, ಅಲ್ಲಿಗೆ ಹೋಗುವ ಆಶೆ ಯನ್ನೇ ಬಿಟ್ಟುಬಿಟ್ಟಳು.

ಇಂದಿರೆಯು, ಅದಾವುದನ್ನೂ ಮನಸ್ಸಿಗೆ ಹಚ್ಚಿಕೊಳ್ಳಲಿಲ್ಲ. ಆದರೂ ಉಪೇಂದ್ರನಾರಾಯಣನು ಮಾತ್ರ ನಿತ್ಯವೂ ಇಂದಿರೆಯು ಬೀದಿಯಲ್ಲಿ ತಿರುಗಾಡು

ತ್ತಿರುವುದನ್ನು ನೋಡುತ್ತಿರುವನು. ಪದೇಪದೇ ಅವಳ ರೂಪಾತಿಶಯವನ್ನು ಹಾಗೆಯೇ ಧ್ಯಾನಮಾಡುವನು. ಕೊನೆಗೆ, ಈಕೆ ಯಾರೆಂಬುದನ್ನು ತನಗೆ ಬೇಕಾದವರಿಂದ ಕೇಳಿ ತಿಳಿದುಕೊಂಡನು. ಹೀಗೆಯೇ ಕೆಲವು ದಿನಗಳು ಕಳೆದುವು. ದಿನವು ಕಳೆದ ಹಾಗೆಲ್ಲ, ಇಂದಿರೆಯ ರೂಪವು, ಉಪೇಂದ್ರನ ಹೃದಯದಲ್ಲಿ ಬಲವಾಗಿ ನಾಟಕೊಂಡಿತು. ಕ್ರಮವಾಗಿ ಮೋಹವು ಅಂಕುರಿಸಿತು. ಓದುಬರೆಹವನ್ನೆಲ್ಲಾ ಬಿಟ್ಟು, ಉಪೇಂದ್ರನು ಅವಳನ್ನು ನೋಡುವುದರಲ್ಲಿಯೇ ಕಾಲಹರಣ ಮಾಡತೊಡಗಿದನು. ಇಂದಿರೆಯು ಭಿಕ್ಷೆಗೆ ಹೊರಡುವುದಕ್ಕೆ ಮುಂಚೆಯೇ ತಲಬಾಗಿಲಿನಲ್ಲಿ ಬಂದು ನಿಲ್ಲುವನು. ಅವಳೊಡನೆ ಮಾತನಾಡುವುದಕ್ಕೆ ಸಮಯವನ್ನು ನಿರೀಕ್ಷಣೆ ಮಾಡಿಕೊಂಡಿರುತ್ತಿದ್ದನು.

ಇಂದಿರೆಯು, ಉಪೇಂದ್ರನನ್ನು ಮಾರ್ಗವಶಾತ್ ನೋಡಿದಳು. ಅವಳಿಗೆ ಬಲು ನಾಚಿಕೆಯಾಗಿ ಒಂದೆರಡು ದಿನಗಳು ಬೀದಿಯಲ್ಲಿ ತಿರುಗಾಡುವುದನ್ನೇ ಬಿಟ್ಟಳು. ಈ ಎರಡು ದಿನಗಳು ಗೃಹಕೃತ್ಯ ನಡೆವುದೇ ಕಷ್ಟಕ್ಕೆ ಬಂದಿತು. ಇಂದಿರೆಗಾದರೋ, ಉಪವಾಸದ ಮೇಲೆ ಉಪವಾಸ. ಇಂದಿರೆಯು ಇನ್ನು ತಡೆಯಲಾರದವಳಾದಳು. "ನಾನು ಭಿಕ್ಷೆ ಬೇಡುವ ಹೆಂಗುಸು, ನನಗೆ ನಾಚಿಕೆಯೆಂದರೇನು? ಯಾವನಿಗೋ ಹೆದರಿ, ನಾನು ನನ್ನ ಕೆಲಸವನ್ನು ಮಾಡದೇ ಬಿಡುವುದೆಂದರೇನು? ಇದೂ ಅಲ್ಲದೆ ನನ್ನ ಪತಿಯ ಚರಣಧೂಳಿಯು ನನ್ನ ತಲೆಯ ಮೇಲೆ ಎಲ್ಲಿಯ ವರೆಗೂ ಇರುವುದೊ, ಅಲ್ಲಿಯ ವರೆಗೂ ನಾನು ಯಾವುದಕ್ಕೆತಾನೇ ಭಯಪಡಬೇಕು?" ಎಂದು ಮುಂತಾಗಿ ಚಿಂತಿಸಿ ಎಂದಿನಂತೆ ಭಿಕ್ಷೆ ಬೇಡುವುದಕ್ಕೆ ಹೊರಟಳು. ಇಂದಿರೆಗೆ, ಉಪೇಂದ್ರನಾರಾಯಣನ ಶೀಲಸ್ವಭಾವಗಳು ತಿಳಿಯದೇ ಇರಲಿಲ್ಲ. ನೀಚನಾದ ಅವನು ಏನು ಅತ್ಯಾಚಾರವನ್ನು ಮಾಡಿಬಿಡುವನೋ ಎಂಬುದೊಂದು ಮಾತ್ರ ಅವಳ ಮನಸ್ಸಿಗೆ ಭಯವನ್ನುಂಟುಮಾಡುತಲಿತ್ತು. ಅದಕ್ಕೋಸ್ಕರವೇ ಅವಳು ಅವನ ಮುಂದೆ ತಿರುಗಾಡಲು ಹಿಂಜರಿಯುತಿದ್ದಳು. ಇಂದಿರೆಯ ಸ್ವಾಮಿಯು ಆರೋಗ್ಯಸ್ಥಿತಿಯಲ್ಲಿ ಇದ್ದುದಾಗಿದ್ದರೆ, ಅವಳಿಗೆ ಇಂತಹ ದುರ್ದಶೆಯು ಬರುತಿದ್ದಿತೇ! ಮನೆ ಬಿಟ್ಟು ಹೊರಗೆ ಬಂದುದನ್ನು ಆರಾದರೂ ಅರಿಯುತಿದ್ದರೇ! ಇಲ್ಲ. ಅವಳು ಅಂತಹ ಪುಣ್ಯವನ್ನು ಪಡೆದುಕೊಂಡು ಬಂದವಳಲ್ಲ. ಅವಳಿಗೆ ಬೇರೆ ಉಪಾಯವೇನಾದರೂ ಇದ್ದಿದ್ದರೆ ಅವಳು ಹೀಗೆ ಮಾಡುತಿರಲಿಲ್ಲ. ಆದರೆ ಯತ್ನವಿಲ್ಲದುದರಿಂದ ಅವಳು ಹೊರಗೆ ಬಂದೇ ತೀರಬೇಕಾಯಿತು. ಅದರಂತೆಯೇ ಹೊರಗೆ ಬಂದೂ ಬಿಟ್ಟಳು. ನದಿಯು ಏನು ಅಡ್ಡಿ ಬಂದರೂ ತಾನು ಹೋಗತಕ್ಕ ಮಾರ್ಗವನ್ನು ಹೇಗೆ ಬಿಡುವುದಿಲ್ಲವೊ, ಹಾಗೆಯೇ ಇಂದಿರೆಯೂ ಹೊರಟುಬಿಟ್ಟಳು. ಉಪೇಂದ್ರನಾರಾಯಣನು ಅವಳನ್ನು ನೋಡಿಬಿಟ್ಟನು. ನಿರ್ವಾಕ್ಕಾಗಿ ರೆಪ್ಪೆಹಾಕದೆ ನಿಂತುಕೊಂಡು ನೋಡಿದನು. ಇಂದಿರೆಯು ಅವನ ಮನೆಯ

ಮುಂದೆಯೇ ನಡೆದುಕೊಂಡು ಹೋದಳು. ಎಷ್ಟು ದೂರದ ವರೆಗೂ ದೃಷ್ಟಿಯು ಪ್ರಸರಿಸಬಹುದೋ ಅಷ್ಟರ ವರೆಗೂ, ಉಪೇಂದ್ರನು ಇಂದಿರೆಯನ್ನು ಎಡೆಬಿಡದೆ ನೋಡುತಲಿದ್ದನು. ಇಂದಿರೆಯು ತನ್ನ ಕೆಲಸದ ಮೇಲೆ ಹೊರಟೇ ಹೋದಳು. ಉಪೇಂದ್ರನೂ, ಏನೋ ಆಲೋಚಿಸಿಕೊಂಡು ಮನೆಯೊಳಗೆ ಪ್ರವೇಶಮಾಡಿದನು. ಮನೆಯೊಳಗೆ ಹೋಗಿ ಒಬ್ಬ ಭೃತ್ಯನನ್ನು ಕರೆದನು. ಭೃತ್ಯನು ಬಂದು—ಏನು ಬುದ್ಧಿ ? ಎಂದನು.

ಉಪೇಂದ್ರ—ನಮ್ಮ ಮನೆಯ ಪಾರ್ಶ್ವದಲ್ಲಿ ಆರಿರುವುರೆಂಬುದನ್ನು ನೀನೇನಾದರೂ ಬಲ್ಲೆಯ ?

ಭೃತ್ಯ— ಬಲ್ಲೆನು, ಆದರೆ ಯಾವಾಗಲೂ ಆ ಮನೆಯೊಳಗೆ ಹೋಗಿಲ್ಲ. ಆ ಮನೆಯಲ್ಲಿ ಒಬ್ಬ ಯೌವನಸ್ಥೆಯಾದ ಹೆಂಗುಸು, ಅವಳ ರೋಗಪೀಡಿತನಾದ ಗಂಡನು, ಇವರಿಬ್ಬರೇ ಇರುವುದಾಗಿ ಕೇಳಿರುವೆನು. ಅವರು ಬಲು ದರಿದ್ರರು. ನಿತ್ಯವೂ ಅವರಿಗೆ ಆಹಾರಕ್ಕೆ ದೊರೆಯುವುದೇ ದುರ್ಲಭ. ಮೊದಲು ಮೊದಲು ಅವರ ದಶೆಯು ಚೆನ್ನಾಗಿಯೇ ಇದ್ದಿತೆಂದು ಜನಗಳು ಹೇಳಿಕೊಳ್ಳುವರು. ಜ್ಞಾತಿಗಳ ವ್ಯವಹಾರದಲ್ಲಿ ಎಲ್ಲವೂ ಕಳೆದು ಹೋಗಿರಬಹುದು.

ಉಪೇಂದ್ರ—ಸರಿ, ಗೊತ್ತಾಯಿತು. ನೀನು ಹೋಗಿ ನಮ್ಮ ಮನೆ ಮುದುಕಿಯನ್ನು ಸ್ವಲ್ಪ ಕಳುಹಿಸು.

ಉಪೇಂದ್ರನು ಹೇಳಿಕಳುಹಿಸಿದ ಮುದುಕಿಯು ಜಾತಿಯಲ್ಲಿ ಗೊಲ್ಲರವಳು. ಅವಳಿಗೆ ಸುಮಾರು ೪೦ ವರುಷ ವಯಸ್ಸು. ಈ ವಯಸ್ಸಿನಲ್ಲಿ ಅವಳು ಮುದುಕಿಯಾಗಿರಲಿಲ್ಲ. ಆದರೂ ಉಪೇಂದ್ರನು ಇವಳನ್ನು ಮುದುಕಿ ಎಂದೇ ಕರೆಯುತಲಿದ್ದನು. ನಾವೂ ಅವಳನ್ನು ಮುದುಕಿಯೆಂದೇ ಕರೆದು ಬಿಡುವೆವು. ಈ ಮುದುಕಿಯು, ಉಪೇಂದ್ರನಿಗೆ ಪಾಪಮಾರ್ಗದಲ್ಲಿ ಮುಖ್ಯಸಹಾಯೆಯು. ಮುದುಕಿಯು ಉಪೇಂದ್ರನ ಮನೆಗೆ ಹತ್ತಿರದಲ್ಲಿಯೇ ವಾಸವಾಗಿರುತಿದ್ದಳು. ಮುದುಕಿಯು ಮೊದಲು ಹಾಲು ಮಾರಿಕೊಂಡು ಜೀವನ ಮಾಡುತ್ತಿದ್ದಳು. ಈ ವಿಧವಾಗಿ ಜೀವನ ಮಾಡುವುದಕ್ಕಿಂತಲೂ, ಶ್ರಮವಿಲ್ಲದೇ ಜೀವನಮಾಡುವ ಉಪಾಯವೊಂದನ್ನು ಇವಳು ತಿಳಿದುಕೊಂಡು, ತನ್ನ ಜಾತಿಯ ಕಸಬನ್ನು ಕ್ರಮವಾಗಿ ಬಿಟ್ಟುಬಿಟ್ಟಳು. ಈ ಹೊಸ ವ್ಯಾಪಾರಕ್ಕೆ ಇವಳಲ್ಲಿ ಸಾಕಾದಷ್ಟು ಬಂಡವಾಳವಿದ್ದಿತು. ಸ್ತ್ರೀಯರಿಗೆ ಯೌವನದಲ್ಲಿ ಯಾವುದು ಸಹಾಯವೋ, ಏತರಿಂದ ಪುರುಷರ ಮನಸ್ಸು ಎಳೆಯಲ್ಪಡುವುದೊ, ಆ ರೂಪವು ಇನ್ನೂ ಅವಳಲ್ಲಿ ಥಳಥಳಿಸುತಲಿತ್ತು. ಕಲ್ಲೆದೆಯನ್ನು ಕೂಡ ಕರಗಿಕರಗಿ ನೀರಾಗಿ ಹರಿದುಹೋಗುವಂತೆ ಮಾಡಿಬಿಡುವ ಮಂದ

ಸ್ಮಿತವು, ತಾಂಬೂಲರಾಗರಂಜಿತವಾದ ತುಟಿಯ ಮೇಲೆ ಪದೇ ಪದೇ ಕ್ರೀಡಿಸುತ ಲಿದ್ದಿತು. ನವಕುಸುಮ ಶೋಭಿತವಾದ ಕೇಶರಾಶಿಯ ಸೊಬಗು, ಸುವರ್ಣಚ್ಛಾಯೆ ಯುಳ್ಳ ಅಂಗಾಂಗಗಳ ಸೌಕುಮಾರ್ಯವು, ಪುಂಖಾನುಪುಂಖವಾಗಿ ಬೀರುತ್ತಿರುವ ಸ್ತ್ರೀಜನ ಸಾಧಾರಣವಾದ ಕಡೆಗಣ್ಣ ನೋಟವು ಈಕೆಯಲ್ಲಿ ಏಕಾಧಿಪತ್ಯಮಾಡು ತಲಿದ್ದುವು. ಇವಳು ತನ್ನ ಜಾತಿಗೆ ಯೋಗ್ಯವಾದ ವೇಷಭೂಷಗಳನ್ನು ಧಾರಣೆ ಮಾಡಿದ್ದರೂ, ಇವಳಲ್ಲಿ ಮೇಲೆ ಹೇಳಿದ ಅನನ್ಯಸಾಧಾರಣವಾದ ಮೋಹನ ಶಕ್ತಿಯು ಇದ್ದುದರಿಂದ, ಕಾಮುಕರು ಯುಕ್ತಾಯುಕ್ತವಿಲ್ಲದೆ, ಇವಳ ಚರಣ ಪ್ರಾಂತ್ಯದಲ್ಲಿ ಬಿದ್ದು ಒದೆದಾಡುತ್ತಿದ್ದರು. ಕಾಮಾಂಧರ ನಡವಳಿಕೆಯೇ ಹೀಗೆ. ಪತಂಗದ ಹುಳುವು ದೀಪದ ಪ್ರಕಾಶದಲ್ಲಿ ಮುಗ್ಧವಾಗಿ ಅದರಲ್ಲಿ ಬಿದ್ದು ತನ್ನ ಜೀವವನ್ನೇ ಸಮರ್ಪಣೆ ಮಾಡಿಬಿಡುವುದು.

ಈ ಮುದುಕಿಯು ಭೃತ್ಯನೊಡನೆ ಬಂದು, ಮುಗುಳುನಗೆಯೊಡನೆ, ಉಪೇಂದ್ರನ ಮೇಲೆ ಬಂದು ಚಿಕ್ಕದಾದ ಕಟಾಕ್ಷವನ್ನು ಬೀರಿದಳು. ಭೃತ್ಯನು ಈಕೆಯನ್ನು ಉಪೇಂದ್ರನ ಹತ್ತಿರ ಬಿಟ್ಟು ತನ್ನ ಕೆಲಸದ ಮೇಲೆ ಹೊರಟುಹೋದನು. ಮುದುಕಿಯು ಮತ್ತೆ ಒಂದು ನಗೆಯನ್ನು ನಕ್ಕು—ಬಾಬು ! ಏತಕ್ಕೆ ಹೇಳಿಕಳುಹಿಸೋಣವಾಯಿತು ? ಎಂದಳು.

ಉಪೇಂದ್ರ—ನಮ್ಮ ಮನೆಯ ಪಕ್ಕದಲ್ಲಿರುವವರಾರು, ನಿನಗೆ ಗೊತ್ತುಂಟೆ?

ಮುದುಕಿ—ಯಾವ ಭಾಗದಲ್ಲಿ ?

ಉಪೇಂದ್ರ—ಪೂರ್ವಕ್ಕೆ.

ಮುದುಕಿಯು, ಮತ್ತೊಂದಾವೃತ್ತಿ ನಕ್ಕು, ಬಿರುಗಣ್ಣಿನಿಂದ ಉಪೇಂದ್ರನನ್ನು ನೋಡಿ ನನಗೆ ಸಂಗತಿಯೆಲ್ಲವೂ ಗೊತ್ತಾಯಿತು ; ಅಲ್ಲಿ ಮಾತ್ರ ನಮ್ಮ ಬೇಳೆಯು ಬೇಯುವ ಹಾಗಿಲ್ಲ.

ಉಪೇಂದ್ರ—ನಾನು ಬಲು ಪ್ರಯತ್ನಮಾಡಿ ನೋಡಿದೆನು. ಆದರೆ ಆವುದೂ ಸಾಗಲಿಲ್ಲ. ಅದಕ್ಕೋಸ್ಕರವಾಗಿಯೇ ನಿನ್ನನ್ನು ಕರೆದುದು. ನೀನು ನನ್ನನ್ನು ಏನ ಮಾಡಬೇಕೆಂದು ಹೇಳಿದರೂ ಮಾಡಲು ಸಿದ್ಧನಾಗಿರುವೆನು.

ಮುದುಕಿ—ಈ ಕೆಲಸವಾದರೋ ಕಠಿನ. ಪ್ರಕೃತ ಸಂದರ್ಭದಲ್ಲಿ ಈ ಕೆಲಸವು ನನ್ನಿಂದ ಸಾಧ್ಯವಾಗಲಾರದೆಂದು ತೋರುತ್ತದೆ.

ಮುದುಕಿಯ ಮಾತನ್ನು ಕೇಳಿ ಉಪೇಂದ್ರನ ಮನೋರಥವು ಸ್ವಲ್ಪ ತಗ್ಗಿತು. ಮುದುಕಿಗೆ ಅದು ಗೊತ್ತಾಗದೇ ಇರಲಿಲ್ಲ. ಅನಂತರ ಆ ಮಾತು ಈ ಮಾತು

ಆಡುತ್ತಾ,—ನೋಡು, ಬೇರೆ ಉಪಾಯದಿಂದ ಕೆಲಸವು ಸಾಧ್ಯವಾಗುವುದೆಂದು ತೋರುವುದು. ಆದರೆ ಹಣದಿಂದ ಸಾಧ್ಯವಾದರೆ ಆಗ ಬಹುದು. ಅವಳಿಗೆ ಗಂಡನಲ್ಲಿ ವಿಶೇಷವಾದ ಭಕ್ತಿಯಿರುವುದು. ಅವಳು ಸ್ವಾಮಿಗೋಸ್ಕರವಾಗಿಯೇ ಎಲ್ಲ ಕೆಲಸಗಳನ್ನೂ ಮಾಡುತ್ತಿರುವಳೆಂದು ನನಗೆ ನಂಬಿಕೆ, ಎಂದು ನುಡಿದಳು.

ಇಬ್ಬರೂ ಬಹಳ ಹೊತ್ತು ಏನೇನೋ ಚಿಂತಿಸಿದರು. ಕೊನೆಗೆ ಉಪೇಂದ್ರನು ಇಂದಿರೆಗೆ ಯತ್ಕಿಂಚಿದುಪಕಾರ ಮಾಡುವುದಾಗಿ ಒಪ್ಪಿಕೊಂಡನು. ಈ ವ್ಯಾಪಾರದಲ್ಲಿ ಮಧ್ಯಸ್ಥೆಯಾದರೆ, ತನಗೂ ವಿಶೇಷವಾಗಿ ಲಾಭವುಂಟೆಂದು ವೃದ್ಧೆಯು ತಿಳಿದು, ಇಂದಿರೆಯ ಮನೆಗೆ ತಾನೇ ಹೋಗಿ ಅವಳಿಗೆ ಎಂತಹ ಪ್ರಯೋಜನವಾಗಬೇಕೆಂಬುದನ್ನು ತಿಳಿದುಕೊಂಡು ಬರುವುದಾಗಿ ಒಪ್ಪಿಕೊಂಡಳು. ಒಂದು ದಿವಸ ವೃದ್ಧೆಯು ಇಂದಿರೆಯ ಮನೆಗೆ ಏನೋ ನಿಮಿತ್ತಮಾಡಿಕೊಂಡು ಹೋದಳು. ಮನೆಯ ಯಜಮಾನನಿಗೆ ಅನಾರೋಗ್ಯವೆಂಬುದನ್ನು ಕೇಳಿ, ಕೇವಲ ವ್ಯಸನಪಟ್ಟವಳಂತೆ ನಟಿಸಿದಳು. ಇಂದಿರೆಯನ್ನು ಬಹಳವಾಗಿ ಸಂತೈಸಿದಳು. ಇಂದಿರೆಗೆ ಬೇಕಾದುದನ್ನು ಆಗಾಗಲೇ ತಂದುಕೊಡುವುದಕ್ಕೆ ಪ್ರಾರಂಭಮಾಡಿದಳು. ಇದನ್ನು ನೋಡಿ ಇಂದಿರೆಯು, ಭಗವಂತನು ತನ್ನಲ್ಲಿ ಕನಿಕರವಿಟ್ಟು ತನ್ನ ವ್ಯಸನವನ್ನು ದೂರಮಾಡುವುದಕ್ಕಾಗಿಯೇ ಈ ವೃದ್ಧೆಯನ್ನು ಕಳುಹಿಸಿಕೊಟ್ಟಿರುವನೆಂದು ನಂಬಿದಳು. ಇದಕ್ಕಾಗಿ ಭಗವಂತನನ್ನು ಬಹಳವಾಗಿ ಕೊಂಡಾಡಿದಳು. ಮುದುಕಿಯ ಯತ್ನದಿಂದ ದಿನೇ ದಿನೇ ಇಂದಿರೆಗೆ ಕಾಯಿಕ, ವಾಚಿಕ, ಮಾನಸಿಕ ವ್ಯಸನಗಳು ದೂರವಾಗುತ ಬಂದುವು. ಕೊನೆಗೆ ಇಂದಿರೆಗೆ ವೃದ್ಧೆಯಲ್ಲಿ ಪರಮ ವಿಶ್ವಾಸವೇರ್ಪಟ್ಟಿತು.

ಉಪೇಂದ್ರನು ಇಂದಿರೆಯನ್ನು ತಾನು ಆವಾಗ ಹೊಂದುವೆನೆಂಬ ಆಲೋಚನೆಯಲ್ಲಿ ದಿನವನ್ನು ಕಳೆಯುತ ಬಂದನು. ಒಂದು ದಿನ ಹಾಗೆಯೇ ಚಿಂತಿಸಿದನು. "ಇಂದಿರೆಯ ಗಂಡನು ಬದುಕಿರುವ ವರೆಗೂ ನನ್ನ ಮನೋರಥವು ಸಫಲವಾಗಲಾರದು. ಹೀಗೆಯೇ ಕಾಲವು ಕಳೆದುಹೋಗುತ ಬಂದರೆ, ಮುಂದೆ ಮತ್ತಾವಾವ ತೊಂದರೆಗಳು ಸಂಭವಿಸುವುವೋ, ಅದನ್ನಾರು ಬಲ್ಲರು? ಹೇಗಾದರೂ ಮಾಡಿ ಅವಳನ್ನು ಈಗಲೇ ಕೈವಶಮಾಡಿಕೊಳ್ಳಬೇಕು," ಎಂದು ಚಿಂತಿಸಿ, ನೀಚಾಶಯನಾದ ಒಬ್ಬ ವೈದ್ಯನನ್ನು ಹಣದ ಆಸೆ ತೋರಿಸಿ ಕೈಕೆಳಗೆ ಹಾಕಿಕೊಂಡನು.

ವೈದ್ಯನು ಹಣದ ದುರಾಸೆಯಿಂದ, ಇಂದಿರೆಯ ಗಂಡನನ್ನು ವಿಷಪ್ರಯೋಗ ಮಾಡಿ ಕೊಲ್ಲುವುದಾಗಿ ಸಮ್ಮತಿಸಿದನು. ವೃದ್ಧೆಯು ಒಂದು ದಿವಸ ಇಂದಿರೆಯನ್ನು ಕುರಿತು,—ತಾಯಿ! ನಿಮ್ಮ ಯಜಮಾನರ ರೋಗವೇನೋ ಬಲವಾದುದು, ಹೀಗೆಯೇ ಇದ್ದಲ್ಲಿ, ರೋಗವು ಹೇಗೆ ವಾಸಿಯಾದೀತು? ಒಬ್ಬ ಒಳ್ಳೆಯ ವೈದ್ಯ

ನನ್ನು ಕರೆತಂದು ತೋರಿಸಬಾರದೆ? ಬೇಕಾದರೆ ಒಬ್ಬ ಬುದ್ಧಿಮಂತನಾದ ವೈದ್ಯನನ್ನು ಕರೆದುಕೊಂಡು ಬರಲೇ ? ಎಂದು ಕೇಳಿದಳು.

ಮುದುಕಿಯ ಮಾತುಕತೆಗಳನ್ನು ಕೇಳಿ, ಇಂದಿರೆಗೆ ಸ್ವಲ್ಪ ಸಂದೇಹ ತೋರಿತು. "ಇಷ್ಟು ಆದರದಿಂದ ಕೆಲಸಮಾಡುವುದು ನೋಡಿದರೆ, ಮುದುಕಿಗೆ ಏನಾದರೂ ಗೂಢವಾದ ದುರಭಿಸಂಧಿ ಇರಬಹುದೇ? ಹಾಗಿಲ್ಲದ ಪಕ್ಷದಲ್ಲಿ, ನನ್ನಿಂದ ಪ್ರತಿಫಲವನ್ನಪೇಕ್ಷಿಸದೆ, ಯಾರು ತಾನೆ ಹೀಗೆ ಕೆಲಸಮಾಡಬಲ್ಲರು ?" ಎಂದು ಇಂದಿರೆಯು ತನ್ನೊಳು ತಾನೆ ಆಲೋಚಿಸಿಕೊಂಡಳು. ಒಂದು ವೇಳೆ ಇವಳು ವ್ಯಥೆಯ ವಿಷಯವಾಗಿ ಆಲೋಚಿಸಿ ನೋಡುವಳು. ಮತ್ತೊಂದು ವೇಳೆ "ಈಶ್ವರನೇ ನನ್ನ ಕ್ಷೇಮಕ್ಕೋಸ್ಕರವಾಗಿ ಈ ಮುದುಕಿಯನ್ನು ಕರೆತಂದು ಬಿಟ್ಟಿರುವನು. ಇಲ್ಲದೇ ಹೋದರೆ, ಇವಳು ಇಲ್ಲಿಗೆ ಬರಲು ಕಾರಣವೇನಿದ್ದಿತು" ಎಂದುಕೊಂಡು ಸುಮ್ಮನಾಗುತಿದ್ದಳು.

ಮತ್ತೊಂದು ದಿವಸ ವೃದ್ಧೆಯು ಮತ್ತೆ ಮಾತನ್ನೆತ್ತಿದಳು. "ಬುದ್ಧಿಮಂತನಾದ ವೈದ್ಯನಿಗೆ ತೋರಿಸಿದಲ್ಲದೇ, ಈ ರೋಗವು ವಾಸಿಯಾಗುವ ಸಂಭವವಿಲ್ಲ. ಸಮೀಪದಲ್ಲಿಯೇ ಒಬ್ಬ ಒಳ್ಳೆಯ ವೈದ್ಯನಿರುವನು. ಅವನು ಬಡವರ ಆಧಾರಿ. ಬಡವರಿಂದ ಒಂದು ಕಾಸೂ ತೆಗೆದುಕೊಳ್ಳದೆ, ಒಳ್ಳೆಯ ಔಷಧವನ್ನು ಕೊಡುವನು. ನೀವು ಹೀಗೆಯೇ ಕಾಲವನ್ನು ಕಳೆವುದು ಸರಿಯಾಗಿ ಕಂಡುಬರುವುದಿಲ್ಲ. ಇಷ್ಟರ ಮೇಲೆ ನಿಮ್ಮ ಇಷ್ಟಬಂದಂತೆ ಮಾಡಬಹುದು." ಎಂದು ಹೇಳಿದಳು. ಇಂದಿರೆಯು ತನ್ನ ಗಂಡನಿಗೆ ಹೇಗಾದರೂ ಗುಣವಾದರೆ ಸಾಕೆಂದು ವೃದ್ಧೆಯ ಮಾತಿಗೆ ಒಪ್ಪಿಕೊಂಡಳು. ಆದರೂ ಅವಳ ಮನಸ್ಸಿನಲ್ಲಿ ಹೇಳಲಸಾಧ್ಯವಾದ ದುಃಖವು ಆವರಿಸಿಕೊಂಡಿತು. ವೃದ್ಧೆಯ ಮಾತಿಗೆ ಒಪ್ಪಿದರೆ ಹೇಗೋ, ಒಪ್ಪದಿದ್ದರೆ ಹೇಗೊ—ಇಂದಿರೆಗೆ ಏನು ಮಾಡುವುದಕ್ಕೂ ಕಷ್ಟಕ್ಕೆ ಬಂದಿತು. ಅವಳಿಗೆ ದಿಕ್ಕೇ ತೋರದಂತಾಯಿತು. ದೇವರ ಮೇಲೆ ಭಾರ ಹಾಕಿ ಒಪ್ಪಿಕೊಂಡಳು.

ಮರುದಿನ, ವೃದ್ಧೆಯು ಹೊಸ ಪಂಡಿತನನ್ನು ಕರೆದುಕೊಂಡು ಬಂದಳು. ಪಂಡಿತನು ರೋಗಿಯನ್ನು ನೋಡಿ, ನಾನಾ ವಿಧವಾಗಿ ಮಾತನ್ನು ವೆಚ್ಚಮಾಡಿದನು. ಮಧ್ಯ ಮಧ್ಯದಲ್ಲಿ, ಇತರ ವೈದ್ಯರನ್ನು ನಿಂದಿಸುತ್ತಲೂ, ತನ್ನನ್ನು ತಾನೇ ಹೊಗಳಿಕೊಳ್ಳುತ್ತಲೂ, ಆ ದಿನ ಕಾಲವನ್ನು ಕಳೆದನು. ಮನೆಗೆ ಹೊರಡುವಾಗ, ಏನೋ ಒಂದು ಔಷಧವನ್ನು ಕೊಟ್ಟು ಅದಕ್ಕೆ ತಕ್ಕ ಅನುಪಾನವನ್ನು ಹೇಳಿ ಹೊರಟುಹೋದನು. ಆ ದಿವಸ ವೈದ್ಯನು ಕೊಟ್ಟ ಔಷಧವು ಎಂಥದೆಂಬುದನ್ನು ನಾವು ವಿಶೇಷವಾಗಿ ಹೇಳಬೇಕಾದುದಿಲ್ಲ. ಪ್ರತಿನಿತ್ಯವೂ ವೈದ್ಯನು ರೋಗಿಯ ಮನೆಗೆ ಎರಡು ಮೂರು ಆವೃತ್ತಿ ಬಂದು ಹೋಗುತಿದ್ದನು. ರೋಗಿಗೆ ಔಷಧ

ವನ್ನು ತನ್ನ ಕೈಯಿಂದಲೇ ಕುಡಿಸಿಬಿಟ್ಟು ಮನೆಗೆ ಹಿಂದಿರುಗಿ ಹೋಗುತಿದ್ದನು. ಮೂರು ನಾಲ್ಕು ದಿನಗಳೊಳಗಾಗಿ, ರೋಗಿಗೆ ರೋಗವು ಬಲವಾಯಿತು. ಮುದುಕಿಯು, ಇದನ್ನು ನೋಡಿ ಕೇವಲ ಖಿನ್ನೆಯಾದವಳಂತೆ ಕಾಣಿಸಿಕೊಂಡಳು. ಇಂದಿರೆಯು ಅಳುತಿದ್ದರೆ ಅವಳ ಜತೆಯಲ್ಲಿ ತಾನೂ ಅಳುವಳು. ಇಂದಿರೆಯ ತಲೆಯ ಮೇಲೆ ಆಕಾಶವೇ ಕಳಚಿಬಿದ್ದಂತಾಯಿತು. ನಾಲ್ಕು ದಿಕ್ಕುಗಳಲ್ಲಿಯೂ ಅಂಧಕಾರವು ಕವಿದುಕೊಂಡಿತು. ಅವಳು ಕೊಂಚ ಹೊತ್ತಿನ ಮೇಲೆ ಜ್ಞಾನ ಹೋದವಳಾಗಿ ಭೂಮಿಯಲ್ಲಿ ಬಿದ್ದುಬಿಟ್ಟಳು. ಮತ್ತೆ ಅವಳಿಗೆ ಸಂಜ್ಞಾಲಾಭವುಂಟಾಯಿತು. ಅವಳಿಗೆ ಮತ್ತೆ ಜ್ಞಾನ ಬಂದುದಕ್ಕಾಗಿ ಬಹಳ ವ್ಯಸನಪಟ್ಟಳು. ಭೂಮಿಯಲ್ಲಿ ಬಿದ್ದೊಡನೆಯೇ ಹಾಗೆಯೇ ಪ್ರಾಣವು ಹೋಗಿಬಿಟ್ಟಿದ್ದರೆ ಮುಂದಿನ ಪ್ರಪಂಚದ ಯಾವ ಕಷ್ಟವೂ ತೋರುತ್ತಿರಲಿಲ್ಲವೆಂದು ಆಲೋಚಿಸಿದಳು. ಅವಳಿಗೆ ಈ ಜೀವಿತಕಾಲದಲ್ಲಿ ಯಾರ ಆಶ್ರಯವು ಸ್ವರ್ಗವಾಗಿದ್ದಿತೋ ಆ ಆಶ್ರಯವು ಈಗ ಭಗ್ನವಾಗಿಹೋಯಿತು. ಇಂದಿರೆಯು ಈ ವ್ಯಸನವನ್ನು ಸಹಿಸಲಾರದೆ ಗಟ್ಟಿಯಾಗಿ ಅತ್ತುಬಿಟ್ಟಳು. ವೃದ್ಧೆಯು ಬಹುವಾಗಿ ಸಮಾಧಾನ ಹೇಳಿದಳು. ಅದಾವುದೂ ಫಲಕಾರಿಯಾಗಲಿಲ್ಲ. ಈ ಸಂದರ್ಭಗಳೆಲ್ಲವೂ ನಡೆಯುತ್ತಿರುವಾಗ ಆ ಮನೆಯ ಮುಂದುಗಡೆ ಒಬ್ಬ ಮನುಷ್ಯನು ನಿಂತು ನೋಡುತಿದ್ದನು. ಇಂದಿರೆಯು ತನ್ನ ವ್ಯಸನಾವಸ್ಥೆಯಲ್ಲಿ ಆ ಮನುಷ್ಯನು ಯಾರಾಗಿರಬಹುದೆಂದು ಕೂಡ ಗೊತ್ತುಮಾಡಿಕೊಳ್ಳದೆ ಅವನನ್ನು ತನಗೆ ಉಪಕಾರಮಾಡುವಂತೆ ಬೇಡಿಕೊಂಡಳು. ಅಪರಿಚಿತನು ಇಂದಿರೆಯನ್ನು ನೋಡಿ "ನಾನು ಮಾಡಬೇಕಾದುದೆಲ್ಲವನ್ನೂ ಈ ವೃದ್ಧೆಯೇ ಮಾಡುತ್ತಿರುವಳು. ನನ್ನ ಅನುಮತಿಯಿಂದಲೇ ಇವಳು ನಿನಗೆ ಶುಶ್ರೂಷೆ ಮಾಡುತಿರುವಳು. ನನ್ನ ಮಾತಿನಲ್ಲಿ ನಿನಗೆ ನಂಬಿಕೆಯಿರುವುದಾದರೆ ನಾನು ನಿನ್ನನ್ನು ಕಾಪಾಡುವೆನು." ಎಂದು ಹೇಳಿದುದನ್ನು ಕೇಳಿ, ಇಂದಿರೆಯು, ಮರ್ಮಾಹತೆಯಾಗಿ ಬಿರುಗಣ್ಣುಗಳಿಂದ ಅಪರಿಚಿತನನ್ನು ನೋಡುತ್ತಾ—ಏನು ಹೇಳಿದೆ? ನಾನು ಅನಾಥೆಯಾದ ಹೆಂಗುಸು. ಈ ನನ್ನ ಅವಸ್ಥೆಯನ್ನು ನೋಡಿ, ದುರಭಿಸಂಧಿಯಿಂದ ನನ್ನಲ್ಲಿ ಅತ್ಯಾಚಾರಮಾಡುವುದು ಪುರುಷನಾದವನಿಗೆ ಧರ್ಮವಲ್ಲ. ನನ್ನ ಜೀವಿತೇಶನು ಎಲ್ಲಿರುವನೋ ನಾನು ಅಲ್ಲಿರುವುದೇ ನನಗೆ ಮಂಗಳವು. ನೀನು ಇಲ್ಲಿ ನಿಲ್ಲದೆ ಹೊರಟುಹೋಗು, ಎಂದು ಅರಚಿದಳು.

ಕೂಡಲೆ, ಇಂದಿರೆಗೆ ಜ್ಞಾನವು ತಪ್ಪಿತು. ಸ್ವಲ್ಪ ಹೊತ್ತಿನ ಮೇಲೆ ಚೇತರಿಸಿಕೊಂಡು ಸುತ್ತಲೂ ನೋಡಿದಳು, ಅಷ್ಟು ಹೊತ್ತಿಗೆ ಗಂಡನ ಪ್ರಾಣವು ಹೋಗಿದ್ದಿತು. ಅದನ್ನು ನೋಡಿ, 'ಹೋ' ಎಂದು ಚೀತ್ಕಾರಮಾಡಿದಳು. ಗಂಡನ ಕಾಲು ಮೇಲೆ ಬಿದ್ದು ಅವನ ಮೃತದೇಹವನ್ನು ಆಲಿಂಗಿಸಿಕೊಂಡಳು. ಮನೆಯೆಲ್ಲವೂ ರೋದನಧ್ವನಿಯಿಂದ ತುಂಬಿಹೋಯಿತು. ಈ ಗದ್ದಲವನ್ನು ಕೇಳಿ ನೆರೆಹೊರೆ

ಜನಗಳೆಲ್ಲರೂ ಬಂದರು. ಅನೇಕರು ಬಲು ವ್ಯಸನಪಟ್ಟರು. ಮತ್ತೆ ಕೆಲವರು ಧರ್ಮದ ಮೇಲೆ ದೃಷ್ಟಿಯಿಟ್ಟು ಮೃತದೇಹಕ್ಕೆ ಸಂಸ್ಕಾರ ಮಾಡುವುದಕ್ಕೆ ಯತ್ನ ಪರರಾದರು. ಶವವು ಮನೆಯಿಂದ ಹೊರಗೆ ಸಾಗಿಹೋಯಿತು. ಇಂದಿರೆಯು ಎದೆಯನ್ನು ಬಡಿದುಕೊಳ್ಳುತ್ತಾ ಶವದ ಹಿಂದೆ ಹಿಂದೆ ಹೊರಟಳು. ಮುದುಕಿಯು ಅವಳ ಜತೆಯಲ್ಲಿಯೇ ಹೊರಟಳು. ಕ್ಷಣಕಾಲದಲ್ಲಿಯೇ ನದೀತೀರದಲ್ಲಿ ಇಂದಿರೆಯ ಸ್ವಾಮಿಯ ಶರೀರವು ಅಗ್ನಿದೇವನಿಂದ ಪ್ರಜ್ವಲಿತವಾಯಿತು. ನೋಡುತಿದ್ದ ಹಾಗೆಯೇ ಶವವು ಭಸ್ಮಾವಶೇಷವಾಗಿ ಹೋಯಿತು. ಜನಗಳು ಯಥಾ ಯಥಾ ಹಿಂದಿರುಗಿದರು. ಇಂದಿರೆಯೂ ವೃದ್ಧೆಯೊಡನೆ ಮತ್ತೆ ಮನೆಗೆ ಬಂದು ಸೇರಿದಳು. ಕೆಲವು ಕಾಲವು ಕಳೆಯಿತೋ ಇಲ್ಲವೊ, ಉಪೇಂದ್ರನಾರಾಯಣನು ಅತ್ಯಾಚಾರಕ್ಕೆ ಪ್ರಾರಂಭಮಾಡಿದನು. ವೃದ್ಧೆಯು ಇಂದಿರೆಯನ್ನು ವಂಚಿಸಲು ತನ್ನ ಬುದ್ಧಿಯೆಲ್ಲವನ್ನೂ ವೆಚ್ಚಮಾಡಿದಳು ಫಲಿಸುವುದು ಕಷ್ಟಸಾಧ್ಯವಾಗಿ ಕಂಡು ಬಂದಿತು. ಅವಳನ್ನು ಹೇಗಾದರೂ ಮಾಡಿ, ತನ್ನ ಮನೆಗೆ ಕರೆದುಕೊಂಡು ಬಂದು ಬಿಟ್ಟರೆ, ಮುಂದಿನ ಕೆಲಸವೆಲ್ಲವೂ ಕೈಗೂಡುವುದೆಂದು ಉಪೇಂದ್ರನು ವೃದ್ಧೆಗೆ ಹೇಳಿಕೊಟ್ಟನು.

ಮುದುಕಿಯ ಮಂತ್ರವು ಸಿದ್ಧಿಸಿತು. ಅನಾಥೆಯಾದ ಇಂದಿರೆಯು ಎಷ್ಟು ದಿವಸ ತಾನೇ ಹಠಮಾಡಿ ಸಾಗೀತು. ಪುರುಷರ ಯತ್ನದ ಮುಂದೆ ಸ್ತ್ರೀಯರ ಹಠವು ನಿಲ್ಲಲಾರದು. ಎಂದಾದರೊಂದು ದಿವಸ ಸ್ತ್ರೀಯರು ಸೋತೇ ಸೋಲಬೇಕು. ಇಂದಿರೆಯೂ ಸೋತಳು. ವೃದ್ಧೆಯು ಅವಳನ್ನು ಕರೆದುಕೊಂಡು, ಉಪೇಂದ್ರನ ಮನೆಗೆ ಬಂದು ಸೇರಿದಳು. ಇಂದಿರೆಗೆ ಬೇಕು ಬೇಕಾದ ಅನುಕೂಲತೆಯೆಲ್ಲವನ್ನೂ ಉಪೇಂದ್ರನು ಮಾಡಿಕೊಟ್ಟನು. ಅಂದು ಮೊದಲು, ಇಂದಿರೆಯು ಉಪೇಂದ್ರನಾರಾಯಣನ ಮನೆಯಲ್ಲಿಯೇ ಇರುತಿದ್ದಳು. ಅಲ್ಲಿದ್ದರೂ ತನ್ನ ಬುದ್ಧಿ ಕೌಶಲದಿಂದ ಪಾತಿವ್ರತ್ಯವೆಂಬ ರತ್ನವನ್ನು ಮಾತ್ರ ಬಹು ಜಾಗರೂಕತೆಯಿಂದ, ಕಾಪಿಟ್ಟುಕೊಳ್ಳುತಿದ್ದಳು.

---

## ಹದಿಮೂರನೆಯ ಪರಿಚ್ಛೇದ

ರಾಧಾನಾಥನ ಮಾತನ್ನು ಕೇಳಿದೊಡನೆಯೇ ಇಂದಿರೆಗೆ ಕೋಪ ಬಂದಿತು. ಇಂದಿರೆಗೆ ಕೋಪಬಂದಿತೆಂದು ರಾಧಾನಾಥನು ತಿಳಿದು, ಮಾತನ್ನು ಮಾರ್ಪಡಿಸಿ "ಇಂದಿರೆ! ಉಪೇಂದ್ರನ ವಿವಾಹವು ನಿಶ್ಚಯವಾಯಿತೇನು?" ಎಂದು ಕೇಳಿದನು.

ರಾಧಾನಾಥನು, ಈ ಪ್ರಶ್ನೆಯನ್ನು ಕೇಳಿದುದರಲ್ಲಿ ವಿಶೇಷಕಾರಣ ವಿದ್ದಿತು. ಏನಾದರೂ ಮಾಡಿ ಇಂದಿರೆಯನ್ನು ಆ ಸ್ಥಳ ಬಿಟ್ಟು ಹೊರಕ್ಕೆ ಕಳುಹಿಸುವುದರಿಂದ ತಮ್ಮ ಕೆಲಸವು ಸಾಂಗವಾಗಿ ನಡೆಯುವುದೆಂದು ರಾಧಾನಾಥನು ಆಲೋಚಿಸಿದನು. ಆದರೆ ಇಂದಿರೆಯ ಸಂಕಲ್ಪವು ಒಂದು ವಿಧವಾಗಿದ್ದಿತು. ಇಂದಿರೆಗೆ ಈ ಸಂಗತಿಯು ಮೊದಲೇ ಉಪೇಂದ್ರನ ಭೃತ್ಯನೊಬ್ಬನಿಂದ ಗೊತ್ತಾಗಿದ್ದಿತು. ಅವಳು ತನ್ನ ಆಂತರಿಕವಾದ ಅಭಿಪ್ರಾಯವನ್ನು ಹಾಗೆಯೇ ಮರೆಮಾಚಿಕೊಂಡು "ಎಲ್ಲಿ?" ಎಂದಳು.

ರಾಧಾನಾಥನು, ಉಪೇಂದ್ರನ ಮದುವೆಯ ವಿಚಾರದಲ್ಲಿ ತಾನು ಏನೇನನ್ನು ಕೇಳಿದ್ದನೋ, ಅದೆಲ್ಲವನ್ನೂ ಆದ್ಯೋಪಾಂತವಾಗಿ ಹೇಳಿದನು. ಇಂದಿರೆಯು ಅದನ್ನು ಕೇಳಿ—ಇಷ್ಟು ದಿನಕ್ಕಾದರೂ ಉಪೇಂದ್ರನ ಮುಖಕ್ಕೆ ಬೆಂಕಿ ಹಾಕುವುದು ನಿಶ್ಚಯವಾಗಿರುವುದನ್ನು ಕೇಳಿ, ಬಹಳ ಸಂತೋಷಪಡುವೆನು, ಎಂದಳು.

ಆ ಸಂದರ್ಭದಲ್ಲಿ ಉಪೇಂದ್ರನು ಒಂದು ವಿಧವಾಗಿ ಮತ್ತನಾಗಿ ತನ್ನ ಅಭಿಪ್ರಾಯಗಳಲ್ಲಿ ತಾನೇ ಸಂತೋಷಪಟ್ಟುಕೊಳ್ಳುತ್ತಿದ್ದನು. ಅವನು ಇಂದಿರೆಯ ಮಾತನ್ನು ಕೇಳಿ ಚಕಿತನಾಗಿ "ಇಂದಿರೆ! ನೀನು ಏತಕ್ಕೆ ಇಲ್ಲಿಗೆ ಬಂದೆ? ಮನುಷ್ಯನು ಯಾವಾಗಲೂ ಸ್ವಕಾರ್ಯದಲ್ಲಿಯೇ ಆಸಕ್ತನು. ಎಲ್ಲಿಯ ವರೆಗೂ ಸ್ವಕಾರ್ಯವು ನೆರವೇರುವುದೆಂಬ ಭರವಸೆ ಇರುವುದೋ, ಅಲ್ಲಿಯ ವರೆಗೂ ಮನುಷ್ಯನು ಮಾಡಬೇಕಾದ ಯತ್ನವನ್ನೆಲ್ಲಾ ಮಾಡುವನು. ಸ್ವಾರ್ಥಹಾನಿಯುಂಟಾಗುವುದೆಂದು ಗೊತ್ತಾದರೆ, ಯಾರೂ ಯಾವಾಗಲೂ ಕೆಲಸ ಮಾಡುವುದನ್ನು ನಾನು ನೋಡಿಲ್ಲ. ನಿನ್ನನ್ನು ಸ್ವಾಧೀನ ಮಾಡಿಕೊಳ್ಳುವುದಕ್ಕೆ ಮನುಷ್ಯನು ಎಷ್ಟು ಯತ್ನಮಾಡಬಹುದೋ, ಅಷ್ಟನ್ನೆಲ್ಲಾ ಮಾಡಿದುದಾಯಿತು. ಗುಲಾಮನಂತೆ ಇದ್ದು, ನಿನ್ನನ್ನು ಸೇವಿಸಿದೆನು. ನಿನ್ನ ಸುಖಕ್ಕೆ ಎಲ್ಲಿ ಕುಂದುಂಟಾದೀತೋ ಎಂದು ನಿನಗೆ ಬೇಕಾದುದನ್ನು ಹವಣಿಸಿ ಕೊಡಲು ದಾಸದಾಸಿಯರನ್ನು ನೇಮಿಸಿದ್ದೆನು. ನಮ್ಮ ಮನೆಯಲ್ಲಾದರೋ, ಊಟ ಉಪಚಾರಕ್ಕೇನೂ ಕೊರತೆ ಇಲ್ಲ. ಎಷ್ಟು ಮಾಡಿದರೂ, ನಿನ್ನ ಕಲ್ಲೆದೆಯು ಮಾತ್ರ ಕರಗಲೇ ಇಲ್ಲ. ನಿನಗೆ ಅನೇಕ ವಿಧದಲ್ಲಿ ವ್ಯಸನವನ್ನು ಹೋಗಲಾಡಿಸಲು ನಾನು ಪ್ರಯತ್ನಪಟ್ಟರೂ, ನೀನು ಮಾತ್ರ ನನ್ನದೊಂದು ವ್ಯಸನವನ್ನು ಹೋಗಲಾಡಿಸಲು ಸಮರ್ಥಳಾಗದೇ ಹೋದೆ. ಇರಲಿ. ನೀನು ಇಲ್ಲಿ ನಿಲ್ಲದೆ ಹೊರಟು ಹೋಗು." ಎಂದು ಹೇಳಿದನು. ಅದನ್ನು ಕೇಳಿ ಇಂದಿರೆಯು ಸ್ವಲ್ಪ ನಕ್ಕು "ಉಪೇಂದ್ರ! ನೀನು ಹೇಳುವುದೆಲ್ಲವೂ ನಿಜ. ಪುರುಷರು ಮಾಡಬೇಕಾದ ಕೆಲಸವೆಲ್ಲವನ್ನೂ ನೀನು ಮಾಡಿರುವೆ; ಹೇಳಬೇಕಾದುದನ್ನೂ ಹೇಳಿರುವೆ. ಇದರಲ್ಲಿ ನಿನ್ನ

ತಪ್ಪೇನೂ ಇರುವುದಿಲ್ಲ. ನೀನು ಬಾಲ್ಯದಿಂದಲೂ ಒಳ್ಳೆಯವರ ಸಹವಾಸ ದಲ್ಲಿದ್ದು ಒಳ್ಳೆಯ ಮಾರ್ಗವನ್ನು ಅವಲಂಬಿಸಿದ್ದರೆ, ಇಂತಹ ದುರ್ಬುದ್ಧಿಯು ನಿನಗೆ ಹುಟ್ಟುತ್ತಲೇ ಇರಲಿಲ್ಲ. ವಿದ್ಯೆಯು ಅಜ್ಞಾನವನ್ನು ಹೋಗಲಾಡಿಸಿ ಸುಜ್ಞಾನವನ್ನುಂಟುಮಾಡುವುದೆಂದು ನಾನು ಕೇಳಿರುವೆನು. ಆದರೆ ಅದು ನಿನ್ನಲ್ಲಿ ವಿಪರೀತವಾಗಿ ಪರಿಣಮಿಸಿರುವುದು. ಏಕಪುತ್ರ ವಿಷಯವಾದುದರಿಂದ, ನಿನ್ನ ತಂದೆಯು ನಿನ್ನನ್ನು ಬಲು ಅಕ್ಕರೆಯಿಂದ ಸಲಹಿದನು. ಅವನಿಗೆ ನಿನ್ನ ದುರ್ಗುಣಗಳೆಲ್ಲವೂ ಮುದ್ದಾಗಿಯೇ ಕಾಣುವುವು. ಇದರ ಜತೆಗೆ ನಿನಗೆ ಬೇಕಾ ದಷ್ಟು ಐಶ್ವರ್ಯವಿರುವುದು. ಆ ಐಶ್ವರ್ಯಮದವು ನಿನ್ನನ್ನು ಹೀಗೆಲ್ಲಾ ಮಾಡಿ ಸುವುದು. ಪ್ರಪಂಚವನ್ನೇ ಅರಿಯದ ಯೌವನಸ್ಥನಾದ ನೀನೇ ಈ ಅನರ್ಥ ಗಳಿಗೆಲ್ಲಾ ಕಾರಣವೆಂದು ಹೇಳುವುದಕ್ಕೆ ನನಗೆ ಯಾವ ಅಭ್ಯಂತರವೂ ಇಲ್ಲ. ಮತ್ತು—'' ಅವಳ ಮಾತು ಮುಗಿಯುವುದರೊಳಗಾಗಿಯೇ ಉಪೇಂದ್ರನು ಸ್ವಲ್ಪ ಕೆಂಪೇರಿದ ಕಣ್ಣುಳ್ಳವನಾಗಿ,—ಏನು ಹೇಳಿದೆ? ನಿನಗೆ ಕಷ್ಟಕಾಲಗಳಲ್ಲಿ ಉಪಕಾರಮಾಡಿ ನಿನ್ನನ್ನು ಒಬ್ಬ ಹೆಂಗುಸನ್ನಾಗಿ ಮಾಡಿದುದಕ್ಕೆ, ನಿನಗೆ ಇಷ್ಟು ಮಾತನ್ನಾಡುವುದಕ್ಕೆ ಶಕ್ತಿಯುಂಟಾಯಿತೆ? ನೀನು ಸರಳ ಹೃದಯೆಯಾದ ಹೆಂಗು ಸೆಂದು ಇಲ್ಲಿಯ ವರೆಗೂ ತಿಳಿದು ನಾನು ನಿನ್ನನ್ನು ಬಹಳವಾಗಿ ಪ್ರೀತಿಸುತಲಿದ್ದೆನು. ನಿನ್ನ ಎದೆಯು ಇಷ್ಟು ಕಠಿನವೆಂದು ನಾನು ತಿಳಿದಿರಲಿಲ್ಲ. ನಿನ್ನ ರೂಪದಲ್ಲಿ ನಾನು ಮುಗ್ಧನಾದೆನು. ಅದಕ್ಕಾಗಿಯೇ ನಿನಗೆ ಬೇಕಾದುದೆಲ್ಲವನ್ನೂ ಒಂದೂ ಬಿಡದೇ ನೆರವೇರಿಸಿಕೊಡುತಲಿದ್ದೆನು. ಎಷ್ಟು ಮಾಡಿದರೂ ನಿನ್ನ ಸ್ವಭಾವವು ಬೇರೆಯಾಗಲಿಲ್ಲ. ನೀನು ಒಂದೇ ಹಠಮಾಡಿಕೊಂಡು ನನ್ನನ್ನು ಬಹು ಸಂಕಟಕ್ಕೆ ಗುರಿಮಾಡಿರುವೆ. ನನ್ನ ಪ್ರಯತ್ನವೆಲ್ಲವೂ ನೀರಿನಲ್ಲಿ ಹೋಮಮಾಡಿದಂ ತಾಯಿತು. ನಾನು ಮಾಡಿರುವುದಕ್ಕೆ ಪ್ರತಿಯಾಗಿ ನಿನ್ನಿಂದ ಒಂದು ವಿಶ್ವಾಸದ ಮಾತಾದರೂ ಬಂದೀತೇ ಎಂದು ಕಾದಿದ್ದೆನು. ನಿನ್ನ ಬಾಣಗಳಂತಿರುವ ಮಾತು ಗಳನ್ನು ಕೇಳಿದರೆ ನನ್ನ ಶರೀರವೆಲ್ಲವೂ ಸುಟ್ಟು ಬೂದಿಯಾಗುವುದು. ಹಾ, ಅವಿ ಚಾರಕಾರಿಯಾದ ಮಾರನೇ! ಒಂದು ಕಡೆಯಲ್ಲಿ ನೀನು ಪುಷ್ಪಾಸ್ತ್ರಗಳಿಂದ ನನ್ನ ನ್ನುಹೊಡೆದು ಮಲಗಿಸುವೆ, ಮತ್ತೊಂದು ಕಡೆಯಲ್ಲಿ ಈ ಹಾಳು ಹೆಂಗುಸು ತೀಕ್ಷ್ಣ ತೀಕ್ಷ್ಣಗಳಾದ ವಾಗ್ಬಾಣಗಳಿಂದ ನನ್ನನ್ನು ಧ್ವಂಸಮಾಡುತಲಿರುವಳು. ನಾನು ಯಾರ ಪೆಟ್ಟನ್ನು ಸಹಿಸಲಿ, ನನ್ನ ಪ್ರಾಣವು ಹೇಗೆ ತಾನೆ ಉಳಿದೀತು? ಎಂದು ಹೇಳುತ್ತಾ ಕಣ್ಣುಗಳಲ್ಲಿ ಧಾರಾಕಾರವಾಗಿ ನೀರನ್ನು ಸುರಿಸಲಾರಂಭಿಸಿದನು.

ಇದನ್ನು ನೋಡಿ ಇಂದಿರೆಯ ಹೃದಯವು ಸ್ವಲ್ಪ ಕಂಪಿತವಾಯಿತು. ಆದರೆ ಅವಳು ಕ್ಷಣಕಾಲದಲ್ಲಿ ಧೈರ್ಯವನ್ನು ತೆಗೆದುಕೊಂಡು ಮತ್ತೆ ಉಪೇಂದ್ರ ನೊಡನೆ ಮಾತನಾಡಿದಳು.

"ಉಪೇಂದ್ರಬಾಬು? ನೀನು ಹೇಳುವ ಮಾತು ನಿನಗೆ ಮಾತ್ರ ಚೆನ್ನಾಗಿರುವುದೇ ಹೊರತು ಮತ್ತಾರಿಗೂ ಚೆನ್ನಾಗಿರುವುದಿಲ್ಲ. ನೀನು ಕೇವಲ ಸ್ವಾರ್ಥಪರನಾಗಿ ಮತ್ತೊಬ್ಬರ ಸುಖದುಃಖಗಳನ್ನು ಆಲೋಚಿಸುವುದಿಲ್ಲ. ನಿನ್ನ ಸಂಕಟವನ್ನು ನೀನು ಅರಿವುದಾದರೆ ನನ್ನ ಸಂಕಟವನ್ನು ವಿಚಾರಿಸುವರಾರು? ಅತ್ಯಾಚಾರವನ್ನು ಮಾಡುವುದರಲ್ಲಿ ಪ್ರವೃತ್ತನಾದ ನೀನು ನನಗೆ ಮುಂದಾಗತಕ್ಕ ಅನರ್ಥಪರಂಪರೆಗಳಲ್ಲಿ ಒಂದನ್ನಾದರೂ ಚಿಂತಿಸದೇ ಹೋದೆಯಾ? ಸ್ತ್ರೀಯರು ಯಾವಾಗಲೂ ಬಲಹೀನರು; ಬಲಹೀನರನ್ನು ಕಾಪಿಡುವುದು ಶಕ್ತರಾದ ಪುರುಷರಿಗೆ ಮುಖ್ಯವಾದ ಧರ್ಮವಾಗಿದೆ. ಸ್ತ್ರೀಯರಲ್ಲಿರುವ ಅಮೂಲ್ಯವಾದ ಪಾತಿವ್ರತ್ಯವೊಂದನ್ನಾದರೂ ಪುರುಷನು ಅವಶ್ಯವಾಗಿ ಕಾಪಿಡಬೇಕು; ಅದನ್ನೇ ಸೂರೆಗೊಂಡಮೇಲೆ ಸ್ತ್ರೀಯು ಬದುಕಿದ್ದರೂ ಸತ್ತಂತೆಯೇ. ಮಾನಗೆಡಿಸಿ, ನನ್ನನ್ನು ಯಾವಜ್ಜೀವವೂ ವ್ಯಸನಕ್ಕೆ ಗುರಿಮಾಡುವುದರಿಂದ ನಿನಗೆ ಬಂದ ಭಾಗ್ಯವೇನು? ಅದರಿಂದ ಯಾವ ಪುರುಷಾರ್ಥಸಾಧನೆ ಮಾಡಿದಂತಾಯಿತು? ನಿನ್ನ ಉದಾರವಾದ ಮನಸ್ಸಿಗೆ ಅಲಂಕಾರಪ್ರಾಯವಾಗಿರುವ ವಿವೇಕವು ಎಲ್ಲಿಯೋ ಜಾರಿಬಿದ್ದು, ಅದರ ಸ್ಥಾನದಲ್ಲಿ ಪರಸ್ತ್ರೀವ್ಯಾಮೋಹವೆಂಬ ನೀಚ ಗುಣವು ಕಾಲಿಡಬಹುದೆ? ಕ್ಷಣಕಾಲದ ಸುಖದ ಭ್ರಾಂತಿಗೋಸ್ಕರವಾಗಿ ಸದ್ಧರ್ಮಾಚರಣೆಯಿಂದುಂಟಾಗಬಹುದಾದ ಶಾಶ್ವತ ಸುಖವನ್ನು ಹೋಗಲಾಡಿಸಿಕೊಳ್ಳಲಪೇಕ್ಷೆಯುಳ್ಳವನು ಮೂಢನಲ್ಲದೆ ಮತ್ತಾರು? ನಿನಗೆ ಯಾವ ನೀಚನು ಈ ವಿನಾಶಕರವಾದ ದುರ್ಬುದ್ಧಿಯನ್ನು ಉಪದೇಶಿಸಿದನು? ನಿನ್ನ ಅವಿಚಾರಕಾರಿತೆಯನ್ನು ಸುಡು. ಇನ್ನು ಮೇಲಾದರೂ ನೀನು ದುರ್ಜನರ ಸಹವಾಸವನ್ನು ನೀಗಿ ಸದ್ವ್ಯವಹಾರಗಳಲ್ಲಿ ಮನಗೊಡುವುದಾದರೆ, ಭಗವಂತನು ನಿನಗೆ ಕೆಟ್ಟುದನ್ನು ಮಾಡಲಾರನು." ಎಂದು ಉತ್ತರ ಕೊಟ್ಟಳು. ಉಪೇಂದ್ರನು ಇನ್ನು ಮನಸ್ಸಿನ ಆವೇಗವನ್ನು ತಡೆಯಲಾರದವನಾಗಿ ಎದ್ದು ನಿಂತನು. ಬಲಾತ್ಕಾರದಿಂದಲಾದರೂ ಇಂದಿರೆಯನ್ನು ಸ್ವಾಧೀನಪಡಿಸಿಕೊಳ್ಳದಿದ್ದರೆ, ತನ್ನ ಮನೋರಥವು ಈಡೇರುವುದಿಲ್ಲವೆಂದು ಅವಳನ್ನು ಮುಟ್ಟುವುದಕ್ಕೆ ಹೋದನು. ಆಗ ರಾಧಾನಾಥನು, ಏನನ್ನೂ ಮಾತನಾಡದೇ ಸುಮ್ಮನೆ ನೋಡುತ ಕುಳಿತಿದ್ದನು. ಉಪೇಂದ್ರನು ಅತ್ಯಾಚಾರ ಮಾಡುವುದಕ್ಕಾಗಿಯೇ ಉದ್ಯುಕ್ತನಾಗಿರುವನೆಂದು ತಿಳಿದು, ಇಂದಿರೆಯು ಸ್ವಲ್ಪ ಹಿಂದಾದಳು. ಉಪೇಂದ್ರನು ವೇಗದಿಂದ ಮುಂದಾಗಿ ಬಂದು ಇಂದಿರೆಯ ಕೈಯನ್ನು ಹಿಡಿದುಕೊಂಡನು. ಇಂದಿರೆಯ ಮೈಯೆಲ್ಲವೂ ಉರಿದು ಹೋಯಿತು. ಅವಳು ಉಪೇಂದ್ರನ ಹಿಡಿಯಿಂದ ತಪ್ಪಿಸಿಕೊಂಡು ಕೋಪದಿಂದ ಕಣ್ಣುಗಳಲ್ಲಿ ಕೆಂಡಗಳನ್ನು ಸುರಿಸುತ್ತಾ ಹೇಳತೊಡಗಿದಳು. "ನೀಚ! ನೀನು ಏನು ಕೆಲಸ ಮಾಡುವೆ ಯೆಂಬುದೇ ನಿನಗೆ ಗೊತ್ತಿಲ್ಲ. ಯುಕ್ತಾಯುಕ್ತ ವಿವೇ

ಚನೆಯು ನಿನಗಿಲ್ಲದ ಮೇಲೆ ನೀನೇ ಹಾಳಾಗುವೆ. ಖೂಳ! ನನ್ನನ್ನು ಯಾರೆಂದು ತಿಳಿದಿರುವೆ? ನಿಮ್ಮ ಮನೆಯಲ್ಲಿದ್ದ ಮಾತ್ರಕ್ಕೆ, ನಿಮ್ಮ ಮನೇ ಮುದುಕಿಯಂತೆ ಸಾಮಾನ್ಯೆಯೆಂದು ತಿಳಿದೆಯಾ? ನಾನೇನೋ ಅನಾಥೆಯು. ಆದರೆ ನನ್ನ ಮೇಲೆ ನಿನಗೆಷ್ಟು ಸ್ವಾತಂತ್ರ್ಯ? ಹೆಂಗುಸು ಬಲಹೀನೆಯು. ಗಂಡಸೇ ಹೆಂಗುಸನ್ನು ಕಾಪಿಡಬೇಕೆಂದು ನಾನು ಕೇಳಿಕೊಂಡೆನು. ನೀಚಾಶಯನಾದ ನೀನು ನನ್ನನ್ನು ಕಾಪಿಡುವುದು ಗೊತ್ತಾಯಿತು. ನೀನಿನ್ನೂ ವಿವೇಕವಿಲ್ಲದ ಮಗು. ಎಂದಾದರೊಂದು ದಿನ ನಿನಗೆ ಬುದ್ಧಿ ಬರುವುದೆಂದು ತಿಳಿದಿದ್ದೆನು. ಈ ಜನ್ಮದಲ್ಲಿ ನಿನಗೆ ಸದ್ವೃತ್ತಿಯುಂಟಾಗುವುದೆಂದರೇನು! ನಿನ್ನ ದುರ್ವ್ಯಾಪಾರಕ್ಕೆ ತಕ್ಕ ಶಿಕ್ಷೆಯಾಗದ ಪಕ್ಷದಲ್ಲಿ, ನೀನು ಇನ್ನೂ ಕೆಟ್ಟು ಹಾಳಾಗಿ ಹೋಗುವೆ. ನಾನು ನನ್ನ ಕೈಯಿಂದಲೇ ನಿನಗೆ ತಕ್ಕ ಶಿಕ್ಷೆಯನ್ನು ಕೊಡುವೆನು. ಆದರೆ ನಾನು ಧರ್ಮಬದ್ಧೆಯಾಗಿರುವೆನು. ಇರಲಿ, ಇಂದಿರೆಯು ಮಾತ್ರ ಸಾಮಾನ್ಯ ಸ್ತ್ರೀಯೆಂದು ಭಾವಿಸಬೇಡ. ಅವಳ ಆ ಹಾಳುರೂಪವನ್ನು ನಿನ್ನ ದುಷ್ಟಮನಸ್ಸಿನಿಂದ ದೂರಮಾಡು. ಹಾಗಿಲ್ಲದ ಪಕ್ಷದಲ್ಲಿ ನಾನು ನಿನ್ನೊಳಗೇ ಇದ್ದುಕೊಂಡು ನಿನ್ನ ಮರ್ಮವನ್ನೆಲ್ಲವನ್ನೂ ಛೇದಿಸಿಬಿಡುವೆನು. ಕುಲಸ್ತ್ರೀಯರು, ತಮ್ಮ ಪಾತಿವ್ರತ್ಯಕ್ಕೆ ಭಂಗಬರುವುದಾದರೆ, ಪ್ರಾಣವನ್ನಾದರೂ ಬಿಟ್ಟು ಮಾನವನ್ನು ಕಾಪಿಟ್ಟುಕೊಳ್ಳುವರು. ಅಂತಹವರಿಗೆ ಪ್ರಾಣವು ತೃಣಕ್ಕಿಂತಲೂ ಕಡೆಯೆಂದು ನಿನಗೆ ಗೊತ್ತಿಲ್ಲವೆ? ಹೆಂಗುಸು ಹಠಹಿಡಿದರೆ, ಅವಳನ್ನು ವಶಮಾಡಿಕೊಳ್ಳತಕ್ಕವನು ಮೂರುಲೋಕದಲ್ಲಿ ಯಾರುಂಟು? ಈ ಹಾಳು ಹೊಟ್ಟೆಗೆ ಬೇಕಾಗುವ ಒಂದು ತುತ್ತಿನ ಅನ್ನಕ್ಕೆ ತನ್ನ ಮಾನವನ್ನು ಕಳೆದುಕೊಳ್ಳತಕ್ಕ ಹೆಂಗುಸು ಈ ಇಂದಿರೆಯಲ್ಲ. ಈ ನನ್ನನ್ನು ನಿನಗೆ ಮೃತ್ಯುಸ್ವರೂಪಳನ್ನಾಗಿ ತಿಳಿ. ನೀನು ಒಂದು ಹಜ್ಜೆ ಏನಾದರೂ ಮುಂದು ಸರಿದರೆ ನಿನ್ನ ಪ್ರಾಣವು ನಿನ್ನದಲ್ಲ!" ಎಂದು ಹೇಳುತ ಹೇಳುತ, ತನ್ನ ಉಡಿಯಲ್ಲಿದ್ದ ಒಂದು ಸಣ್ಣ ಚೂರಿಯನ್ನು ಈಚೆಗೆ ತೆಗೆದು ಹಿಡಿದುಕೊಂಡು, "ಪ್ರಾಣದ ಆಶೆಯಿಲ್ಲದವರು ಯಾರು ಬೇಕಾದರೂ ನನ್ನ ಮೇಲೆ ಅತ್ಯಾಚಾರಮಾಡಲು ಬರಲಿ. ಆಗ ನಾನಾರೋ, ನನ್ನ ಶಕ್ತಿ ಎಂತಹದೋ ತೋರಿಸುವೆನು," ಎಂದು ಗರ್ಜನೆ ಮಾಡಿದಳು.

ಉಪೇಂದ್ರನ ಅಂಗಾಂಗವೆಲ್ಲವೂ ಗಡಗಡನೆ ನಡುಗಿತು. ರಾಧಾನಾಥನು ಹೇಳದೇ ಅಲ್ಲಿಂದೆದ್ದು ಹೊರಟೇಹೋದನು. ಉಪೇಂದ್ರನು ಮಾತ್ರ ಹೊರಟುಹೋಗಲು ಕಾಲೇ ಬರದೇ ಅಲ್ಲಿಯೇ ನಿಂತಿದ್ದನು. ಇಂದಿರೆಯ ಉಗ್ರಮೂರ್ತಿಯು ಇನ್ನೂ ಸೌಮ್ಯಭಾವವನ್ನು ತಾಳಲೇ ಇಲ್ಲ. ಅದನ್ನು ನೋಡಿ, ಉಪೇಂದ್ರನಿಗೆ ಅಲ್ಲಿ ನಿಂತಿರಲು ಮನವೊಡಂಬಡಲಿಲ್ಲ, ಹೊರಟುಹೋಗಲು

ಕಾಲೇ ಬರಲಿಲ್ಲ. ಇಂದಿರೆಯು ತನ್ನ ಕೋಪವನ್ನು ಸ್ವಲ್ಪ ಸಂವರಣಮಾಡಿಕೊಂಡು, ಆ ಸ್ಥಳದಿಂದ ವೇಗವಾಗಿ ಹೊರಟುಹೋದಳು.

ಉಪೇಂದ್ರನು ಬಹಳ ಖಿನ್ನನಾಗಿ ಸುತ್ತಲೂ ನೋಡಲಾರಂಭಿಸಿದನು. ಎಲ್ಲೆಲ್ಲಿಯೂ ನಿಶ್ಶಬ್ದವಾಗಿದ್ದಿತು. ರಾತ್ರಿಯು ಗಂಭೀರವಾಗುತ್ತಿತ್ತು. ಅಂಧಕಾರವು ಗಿಡಮರಗಳ ಬುಡದಲ್ಲಿ ಇದ್ದುಕೊಂಡು ನೋಟಕರಿಗೆ ಭಯವನ್ನುಂಟುಮಾಡುತಲಿತ್ತು. ಚಂದ್ರದೇವನು ಒಬ್ಬನೇ ಸಂಚರಿಸುತ್ತ, ಗಗನಮಂಡಲವನ್ನು ಅರ್ಧಪಾರಾಗಿದ್ದನು. ಅಷ್ಟು ಹೊತ್ತಿಗೆ ಉಪೇಂದ್ರನಿಗೆ ಮನೆಯು ಸ್ಮರಣೆಗೆ ಬಂದು ಅಲ್ಲಿಂದೆದ್ದು ಮನೆಯ ಕಡೆಗೆ ಹೊರಟುಹೋದನು.

---

## ಹದಿನಾಲ್ಕನೆಯ ಪರಿಚ್ಛೇದ

ಇಂದಿರೆಯು, ಉದ್ಯಾನವನ್ನು ಬಿಟ್ಟವಳು ತಾನಿದ್ದ ಮನೆಯ ಕಡೆಗೆ ಹೋಗಲಿಲ್ಲ. ಮತ್ತೆ ಆ ಮನೆಗೆ ಹೋಗಲು ಅವಳಿಗೆ ಕಾಲೇ ಬಾರದು. ಆದರೆ ಆ ಅರ್ಧರಾತ್ರದಲ್ಲಿ ಯಾರ ಮನೆಗೆ ಹೋಗಲು ಸಾಧ್ಯ? ಎಲ್ಲರೂ ನಿದ್ರೆಯಿಂದ ಮೈಮರೆತು ಮಲಗಿಬಿಟ್ಟಿರುವರು. ಒಂದು ವೇಳೆ ಯಾರ ಮನೆಗಾದರೂ ಹೋಗಿ ಕೂಗಿದರೆ, ಅವರೇನೆಂದು ತಿಳಿದುಕೊಂಡಾರು! ಇಂದಿರೆಯು ಸ್ವಲ್ಪ ಹೊತ್ತು ಹಾಗೆಯೇ ಆಲೋಚಿಸಿದಳು. ಅವಳಿಗೆ ಸುಲೋಚನೆಯು ಜ್ಞಾಪಕಕ್ಕೆ ಬಂದಳು. ಸುಲೋಚನೆಯು ಒಬ್ಬ ಮುದುಕಿ. ಅವಳಲ್ಲಿ ಇಂದಿರೆಗೆ ಮಾತೃಭಕ್ತಿಯಿದ್ದಿತು. ಅವಳು ಒಂದು ಸಣ್ಣ ಗುಡಿಸಲಲ್ಲಿ ವಾಸವಾಗಿರುತಿದ್ದಳು. ಅವಳಿಗೆ ಮತ್ತಾರೂ ದೇಹಾನುಬಂಧಿಗಳಿಲ್ಲದೆ ಅವಳೊಬ್ಬಳೇ ಕಾಲವನ್ನು ಕಳೆಯುತಿದ್ದಳು. ಅವಳಲ್ಲಿಗೆ ಹೋದರೆ ಯಾವ ಭಯವೂ ಇರುವುದಿಲ್ಲವೆಂದು ತಿಳಿದು, ಇಂದಿರೆಯು ಅಲ್ಲಿಗೆ ಹೊರಟಳು. ದಾರಿಯಲ್ಲಿ ಹೋಗುತ, "ಈಗ ನಡೆದ ಸಂಗತಿಯನ್ನು ಮುದುಕಿಗೆ ಹೇಳಕೂಡದು. ಹೇಳಿದರೆ ಕಾರ್ಯಸಿದ್ಧಿಯಾಗುವ ಸಂಭವ ಕಡಮೆ" ಎಂದು ಆಲೋಚಿಸುತ್ತಾ ಸುಲೋಚನೆಯ ಮನೆಯ ಹತ್ತಿರ ಬಂದು ಸೇರಿದಳು.

ಬಹಳ ಹೊತ್ತಾಗಿದ್ದುದರಿಂದ, ವೃದ್ಧೆಯು ಬಾಗಲು ಹಾಕಿಕೊಂಡು ನಿದ್ರೆಮಾಡುತಿದ್ದಳು. ಸುಲೋಚನೆಗೆ ಭೂತವೆಂದರೆ ಬಹಳ ಭಯವಿದ್ದಿತು. ಯಾರೋ ಬಾಗಿಲು ತಟ್ಟಿದ ಶಬ್ದವನ್ನು ಕೇಳಿ, ಸುಲೋಚನೆಗೆ ನಿದ್ರಾಭಂಗವಾಯಿತು. ಆದರೂ ಆಕೆಯು ಮಾತನಾಡಲಿಲ್ಲ. ಅವಳ ಮನಸ್ಸಿನಲ್ಲಿ ಯಾವುದೋ ಭೂತವು ಬಂದು ತನ್ನನ್ನು ಕೂಗುವುದೆಂದೂ, ಅದಕ್ಕೆ ಬಾಗಿಲು ತೆಗೆದರೆ ಖಂಡಿತವಾಗಿಯೂ ತನ್ನನ್ನು ಎಲ್ಲಿಗೋ ಕರೆದುಕೊಂಡು ಹೋಗಿ ಕೊಂದುಬಿಡುವುದೆಂದೂ

ನಿರ್ಧರಿಸಮಾಡಿಕೊಂಡಳು. ಅದಕ್ಕೋಸ್ಕರ ಮುದುಕಿಯು ಮಾತೇ ಆಡಲಿಲ್ಲ. ಸುಲೋಚನೆಯು ಭೂತಕ್ಕೆ ಬಲು ಅಂಜುವಳೆಂದು ಇಂದಿರೆಗೆ ಗೊತ್ತಿತ್ತು. ಆದುದರಿಂದಲೇ ತನ್ನನ್ನೂ ಭೂತವೆಂದು ತಿಳಿದು ಮಾತನಾಡಿಸದೇ ಇರುವಳೆಂದು ಭಾವಿಸಿ, 'ಸುಲೋಚನೆ, ಸುಲೋಚನೆ' ಎಂದು ಕೂಗಲಾರಂಭಿಸಿದಳು. ನಾಲ್ಕೈದು ಸಲ ಕೂಗಿದಳು. ಅನಂತರ ಆ ಮುದುಕಿಗೆ ಸ್ವಲ್ಪ ಧೈರ್ಯ ವುಂಟಾಗಿ, ಒಳಗಿನಿಂದಲೇ "ನೀನಾರು?" ಎಂದು ಕೇಳಿದಳು.

ಇಂದಿರಾ—ನಾನು.

ಸುಲೋಚನಾ—ನಾನು ಎಂದರೆ ಯಾರು? ಎಷ್ಟೋ ಭೂತಗಳೂ "ನಾನು" ಎಂದು ಹೇಳುವುವು. ನೀನು ಯಾರು? ಹೇಳು, ಹೇಳದೇ ಹೋದಲ್ಲಿ ನಾನು ಮಲಗಿದ್ದವಳು ಏಳುವುದೇ ಇಲ್ಲ, ನಾನು ನಿದ್ದೆಮಾಡಿಬಿಡುವೆನು, ಆಮೇಲೆ ನಿನ್ನಮಾತು ಕೇಳುವುದೇ ಇಲ್ಲ.

ಸುಲೋಚನೆಯ ಮಾತನ್ನು ಕೇಳಿ ಇಂದಿರೆಗೆ ಸ್ವಲ್ಪ ಧೈರ್ಯವುಂಟಾಯಿತು. ಬೀದಿಯಲ್ಲಿ ಜನಸಂಚಾರವಿರಲಿಲ್ಲ. ನಿಶಾಕಾಂತನು ತನ್ನ ಮಧುಮಯವಾದ ಕಿರಣಗಳಿಂದ ಜಗತ್ತೆಲ್ಲವನ್ನೂ ಲೇಪನಮಾಡಿಬಿಟ್ಟಿದ್ದನು. ಆಗ ಪ್ರಕೃತಿಯು ಹಾಸ್ಯಮಯಿಯಾಗಿದ್ದಳು. ಒಂದೊಂದು ಪಕ್ಷಿಯು ಗಿಡದ ಕೊಂಬೆಯಲ್ಲಿ ಕುಳಿತು ರಕ್ಕೆಯನ್ನು ಬಡಿದುಕೊಳ್ಳುತ್ತಿದ್ದಿತು. ಕಾಲವರಿತು ಮೌನವ್ರತವನ್ನು ಧಾರಣಮಾಡಿದ ಪ್ರಕೃತಿಸುಂದರಿಯ ಸೌಂದರ್ಯವನ್ನು ಜಾಗರಿತನಾದ ಮನುಷ್ಯನೊಬ್ಬನಲ್ಲದೆ ಮತ್ತಾರು ನೋಡಿ ಸಂತೋಷಪಡತಕ್ಕವರು! ಸುಖಪಡುವುದಕ್ಕೆ ಎಲ್ಲರಿಗೂ ಆಸೆಯಿದ್ದರೂ, ಅನುಭವಿಸುವುದಕ್ಕೆ ಲಭ್ಯವಿರಬೇಕು.

ಪ್ರಕೃತಿಗೂ ಮನಸ್ಸಿಗೂ ಏನೋ ಒಂದು ಸಂಬಂಧವಿರುವುದೆಂದು ತೋರುತ್ತದೆ. ಪ್ರಕೃತಿಯು ಪ್ರಸನ್ನವಾಗಿದ್ದರೆ, ಮನಸ್ಸು ಆನಂದದಿಂದ ಮುಗ್ಧವಾಗುವುದು. ಪ್ರಕೃತಿಯ ಮುಖವು ಮೇಘಚ್ಛಾಯೆಯಿಂದ ಆವೃತವಾಗಿ ಕಳೆಗುಂದಲು, ಮನಸ್ಸಿನಲ್ಲಿಯೂ ದುರ್ದಮನೀಯವಾದದೊಂದು ವ್ಯಸನವು ಆವರಿಸಿಕೊಳ್ಳುವುದು. ಪ್ರಕೃತಿಯ ತತ್ಕಾಲದ ಸೌಂದರ್ಯವನ್ನು ನೋಡಿ, ಇಂದಿರೆಯ ಮನಸ್ಸು ಪ್ರಫುಲ್ಲವಾಯಿತು. ಇಂದಿರೆಯು ಸುಲೋಚನೆಯೊಡನೆ ವಿನೋದಮಾಡಲು ಪ್ರಾರಂಭಮಾಡಿದಳು.

ಇಂದಿರೆಯು ಮೊದಲಿನಂತೆ ಬಾಗಿಲು ತಟ್ಟಿದಳು, ಸುಲೋಚನೆಯು ಹಾಸಿಗೆಯಲ್ಲಿ ಮಲಗಿ ಮುಸುಕು ಹಾಕಿಕೊಂಡೇ "ನೀನಾರೇ ಆಗು, ನಾನು ಮಾತ ನಾಡುವುದಿಲ್ಲ. ನಾನು ಮಲಗಿಬಿಟ್ಟಿರುವೆನು" ಎಂದುತ್ತರವಿತ್ತಳು.

ಇದನ್ನು ಕೇಳಿ, ಇಂದಿರೆಯು, ಬಂದ ನಗುವನ್ನು ತಡೆಯಲಾರದೇ ನಕ್ಕು ಬಿಟ್ಟಳು. ಅನಂತರ "ಸುಲೋಚನೆ!" ಎಂದು ಕೂಗಿದಳು. ಸುಲೋಚನೆ ಎಂದು ಕೂಗಿದ ಧ್ವನಿಯು ಮುದುಕಿಗೆ ಪೂರ್ವಪರಿಚಿತವಾಗಿದ್ದರೂ, ಅವಳು ಹಾಸಿಗೆಯಿಂದೆದ್ದು ಬಂದು ಬಾಗಿಲು ತೆಗೆಯುವಷ್ಟು ಧೈರ್ಯವುಳ್ಳವಳಾಗಿರಲಿಲ್ಲ. ಸುಲೋಚನೆಯು ಆಲೋಚಿಸಿದಳು-"ಭೂತಗಳು ನಾನಾ ಪ್ರಕಾರಗಳಾಗಿರುವುವು. ಅವುಗಳ ಸ್ವರವೂ ನಾನಾ ಪ್ರಕಾರವು. ಎಂದಾದರೊಂದು ದಿನ ಯಾರಾದರೂ ನನ್ನ ಸಂಗಡ ಈ ಸ್ವರದಿಂದ ಮಾತನಾಡಿರುವುದನ್ನು ಭೂತಗಳು ಕೇಳಿರಬಹುದು. ಈಗ ಅದೇ ಸ್ವರದಿಂದಲೇ ಯಾವುದೋ ಒಂದು ಭೂತವು ಬಂದು ನನ್ನನ್ನು ಏತಕ್ಕೆ ಮಾತನಾಡಿಸುತ್ತಿರಬಾರದು! ನನ್ನನ್ನು ಈ ಭೂತಗಳು ಏತಕ್ಕೆ ಹೀಗೆ ಗೋಳುಹಾಕಿಕೊಳ್ಳುತ್ತಿರುವುವು! ಅನಾಥೆಯಾದ ಹಾಳು ಮುದುಕಿಯು ಬದುಕಿರುವುದೇ ಆರಿಗೂ ಸಮ್ಮತವಿಲ್ಲದಿರುವಂತೆ ಕಾಣಬರುವುದು" ಎಂದು ಮುಂತಾಗಿ ಆಲೋಚಿಸುತ್ತಾ ಉತ್ತರವಿತ್ತಳು.

ಸುಲೋಚನಾ—ನಾನು ಈಗ ನಿದ್ರೆಮಾಡುತ್ತಿರುವೆನು. ನಿದ್ರೆಮಾಡುವವರು ಇತರರ ಕೂಗನ್ನು ಕೇಳಬಲ್ಲರೆ! ನಾನೆದ್ದು ಬಾಗಿಲನ್ನು ತೆರೆಯಲಾರೆನು.

ಇಂದಿರೆಯ ಮನಸ್ಸು ಸ್ವಲ್ಪ ವ್ಯಸ್ತವಾಯಿತು. ಹೇಗಾದರೂ ಮಾಡಿ ಬಾಗಿಲನ್ನು ತೆಗೆಯಿಸಿಕೊಂಡೇ ಒಳಗೆ ಹೋಗುವೆನು. ಮತ್ತೆ ಹಿಂದಿರುಗಿ ಹೋಗುವುದು ಯುಕ್ತವಾಗಿ ಕಾಣುವುದಿಲ್ಲವೆಂದು ಅವಳು ಸ್ಥಿರಳಾದಳು.

ಇಂದಿರೆಯು ಮತ್ತೊಂದು ಸಲ ಕೂಗಿದಳು—'ಸುಲೋಚನೇ!'

ಸುಲೋಚನಾ—ಕೂಗುವರಾರು? ಪರಿಚಯಕೊಡು.

ಇಂದಿರಾ—ನಾನು—ಇಂದಿರೆ.

ಸುಲೋಚನಾ—ನೀನು ಇಂದಿರೆಯಾದರೆ, ಒಂದಾವೃತ್ತಿ 'ರಾಮ ರಾಮ' ಎಂದು ಹೇಳು.

ಇಂದಿರೆಯು, ಸುಲೋಚನೆಯ ಮನಸ್ಸಿಗೆ ನಂಬುಗೆಯುಂಟಾಗುವುದಕ್ಕೋಸ್ಕರ 'ರಾಮ, ರಾಮ' ಎಂದಳು. ಭೂತಗಳು 'ರಾಮ, ರಾಮ' ಎಂದು ಹೇಳುವುದಿಲ್ಲವೆಂದು ಸುಲೋಚನೆಯು ಕೇಳಿದ್ದಳು. "ಆರು 'ರಾಮ, ರಾಮ,' ಎಂದು ಹೇಳುವರೋ ಅವರು ಪಿಶಾಚಿಗಳಾಗಿರಲಾರರು;"ಎಂದು ಮನದಲ್ಲಿಯೇ ಭಾವಿಸಿ, ಹಾಸಿಗೆಯಲ್ಲಿಯೇ ಹೊರಳಾಡಲಾರಂಭಿಸಿದಳು. ಹಾಸಿಗೆ ಬಿಟ್ಟು ಮಾತ್ರ ಏಳಲೇ ಇಲ್ಲ.

ಇಂದಿರೆಯು, ಮತ್ತೆ ಸುಲೋಚನೆಯನ್ನು ಕುರಿತು "ಇನ್ನೂ ಬಾಗಿಲು ತೆಗೆಯ ಲಿಲ್ಲ. ನಾನು ನಿನಗೋಸ್ಕರ ಏನೇನನ್ನು ತಂದಿದ್ದೆನೋ, ಅದೆಲ್ಲವನ್ನೂ ಮತ್ತೆ ಹಿಂದಿರುಗಿ ತೆಗೆದುಕೊಂಡು ಹೋಗಬೇಕಾಗುವುದು." ಎಂದಳು.

ಇಂದಿರೆಯು ಇಷ್ಟು ಹೇಳಿದ ಮೇಲೆ, ಸುಲೋಚನೆಗೆ ಧೈರ್ಯವುಂಟಾಯಿತು. ಇಂದಿರೆಯು, ತನಗೆ ಏನೇನೋ ತಂದಿರುವಳೆಂಬ ಆಶೆಯು ಅವಳನ್ನು ಬಾಧಿಸಿ, ಇಷ್ಟು ಧೈರ್ಯಕ್ಕೆ ಆಸ್ಪದ ಕೊಟ್ಟಿತು. ಇನ್ನು ಹಾಸಿಗೆಯಲ್ಲಿ ಮಲಗಿರಲಾರದೇ ಹೋದಳು. ಆಗ ಮುದುಕಿಯು ಮೆಲ್ಲಮೆಲ್ಲನೆ ಹಾಸಿಗೆಯಿಂದೆದ್ದು, ಅನೇಕ ದೇವತೆಗಳನ್ನು ಧ್ಯಾನಮಾಡುತ್ತಾ ಬಂದು ಬಾಗಿಲನ್ನು ತೆಗೆದಳು. ಸುಲೋಚ ನೆಯು ಬಾಗಿಲು ತೆರೆಯುವುದರೊಳಗಾಗಿಯೇ, ಇಂದಿರೆಯು, ತನ್ನ ಮುಖದ ಬಟ್ಟೆ ಯನ್ನು ಚೆನ್ನಾಗಿ ಎಳೆದುಕೊಂಡು ಮುಖವನ್ನು ಮರೆಮಾಡಿಕೊಂಡಳು. ಮುದ್ಯ ಕಿಯು ಬಾಗಿಲನ್ನು ತೆರೆದಳು. ಅವಳಿಗೇನೋ ಭಯವಾಗಿ ಮತ್ತೆ ಬಾಗಿಲನ್ನು ಹಾಕಿಬಿಡಲು ಯತ್ನಮಾಡಿದಳು. ಈ ಸಮಯದಲ್ಲಿ ಇಂದಿರೆಯು ತನ್ನ ಅವ ಗುಂಠನವನ್ನು ಸ್ವಲ್ಪ ಓರೆಮಾಡಿದಳು. ಸುಲೋಚನೆಯು, ಬೆಳದಿಂಗಳ ಬೆಳಕಿ ನಲ್ಲಿ, ಮಂಜಿನಿಂದ ಸಿಕ್ತವಾದ ಕಮಲಪುಷ್ಪದಂತಿರುವ ಇಂದಿರೆಯ ಮುಖವನ್ನು ನೋಡಿ "ಅಮ್ಮಾ, ಇಂದಿರೆ! ಇದೇನು ಇಷ್ಟುಹೊತ್ತಿನಲ್ಲಿ ಬಂದುದು ?" ಎಂದು ಕೇಳಿದಳು.

ಇಂದಿರಾ—ತಾಯಿಯ ಹತ್ತಿರ ಮಗಳು ಬರುವುದಕ್ಕೆ ಕಾಲವಾವುದು, ಅಕಾಲವಾವುದು ?

ಸುಲೋಚನೆಯು, "ಅದೂ ನಿಜವೇ" ಎಂದುಕೊಂಡಳು. ಮುದುಕಿಯು ಮತ್ತಾವ ಮಾತನ್ನೂ ಆಡದಿರುವುದನ್ನು ನೋಡಿ, ಇಂದಿರೆಯು "ಅಮ್ಮಾ! ರಾತ್ರಿಯು ಬಲು ಹೊತ್ತಾಗಿದೆ, ನೀನು ಮಲಗುವುದಕ್ಕೆ ಹೊರಡು" ಎಂದಳು.

ಸುಲೋಚನಾ—ನೀನೆಲ್ಲಿಯೂ ಹೋಗುವುದಿಲ್ಲವಷ್ಟೆ ?

ಇಂದಿರಾ—ಇಲ್ಲ. ನಾನು ಇಲ್ಲಿಯೇ ಮಲಗುವೆನು.

ಸುಲೋಚನಾ—ನನ್ನ ಹತ್ತಿರ ಯಾವ ಹಾಸಿಗೆ ಇರುವುದೋ ಅದನ್ನು ನಿನಗೆ ಹಾಸಿಕೊಳ್ಳುವುದಕ್ಕೆ ಕೊಡುವೆನು. ಇಲ್ಲಿ ನೋಡು, ನಾನು ಯಾವ ಹಾಸಿಗೆ ಯಲ್ಲಿ ಮಲಗಿರುವೆನು !

ಇಂದಿರೆಯು ನೋಡಿದಳು. ಮುದುಕಿಯು ಒಂದು ಹರಕುಚಾಪೆಯನ್ನು ಹಾಸಿಕೊಂಡು, ಎಣ್ಣೆಯ ಮಣಕಿನಿಂದ ಕಪ್ಪಗಿರುವ ಒಂದು ಹಳೆಯದಾದ ತಲೆದಿಂಬನ್ನು ತಲೆಯ ಕೆಳಗಿಟ್ಟುಕೊಂಡು ಮಲಗಿದ್ದಳು.

ಇಂದಿರಾ—ನಿತ್ಯವೂ ಮೆತ್ತಗಿರುವ ಹಾಸಿಗೆಯಲ್ಲಿ ಮಲಗಿಮಲಗಿ ನಿದ್ರೆಯೇ ಬರದಂತಾಯಿತು. ಈದಿನವಾದರೂ ನಿನ್ನ ಹಾಸಿಗೆಯಲ್ಲಿ ಮಲಗಿ ಸುಖವಾಗಿ ನಿದ್ರೆಮಾಡಬೇಕೆಂದು ಬಂದಿರುವೆನು. ನಿನ್ನಲ್ಲಿಯೇ ಕೆಲವು ದಿನಗಳಿದ್ದು ಹೋದ ನಿದ್ರೆಯನ್ನು ಮತ್ತೆ ಬರಮಾಡಿಕೊಂಡು, ನನ್ನ ಮನೆಗೆ ನಾನು ಹೋಗಿಬಿಡುವೆನು.

ಸುಲೋಚನಾ—ನೀನಿರುವುದಕ್ಕೆ ಅಡ್ಡಿಯೇನಿದೆ? ಬಹಳ ಪ್ರಯಾಸಪಟ್ಟು ಈ ಹಾಳು ಹೊಟ್ಟೆಯನ್ನು ಹೊರೆದು ಕೊಳ್ಳುತ್ತಿರುವೆನು. ದೇವರು ಹೊಟ್ಟೆಯನ್ನು ಮಾಡದೆಯೇ ಇದ್ದಿದ್ದರೆ, ಬಹಳ ಚೆನ್ನಾಗಿತ್ತು. ಮಗಳು ಮನೆಗೆ ಬಂದರೆ, ಹೋಗು ಎಂದು ಹೇಳುವುದುಂಟೆ! ನೀನು ನಿರಾತಂಕವಾಗಿ ಬೇಕಾದಷ್ಟು ದಿವಸ ನನ್ನಲ್ಲಿರಬಹುದು.

ಇಂದಿರೆಯು, ತನಗೆ ಸ್ಥಳಕೊಡುವುದಕ್ಕೆ ಮುದುಕಿಗೆ ಅಷ್ಟೇನೂ ಇಷ್ಟವಿಲ್ಲವೆಂದು ತಿಳಿದು-"ಅಮ್ಮಾ! ಮಗಳ ಹತ್ತಿರವಿರುವ ವಸ್ತುಗಳೆಲ್ಲಾ, ತಾಯಿಯ ಸೇವೆಯಲ್ಲಿ ವಿನಿಯೋಗವಾಗಬೇಕಾಗಿದೆ" ಎಂದು ಹೇಳಿದಳು.

ಇಂದಿರೆಯ ಮಾತನ್ನು ಕೇಳಿ, ಸುಲೋಚನೆಯ ಮನವು ಬಲು ಸಂತೋಷಪಟ್ಟಿತು. ಸುಲೋಚನೆಯು, ತನ್ನ ಹಾಸಿಗೆಯಲ್ಲಿಯೇ ಇಂದಿರೆಗೆ ಸ್ವಲ್ಪ ಸ್ಥಳ ಕೊಟ್ಟು ಅವಳನ್ನು ಮಲಗುವಂತೆ ಹೇಳಿದಳು. ಇಬ್ಬರೂ ಒಂದೇ ಹಾಸಿಗೆಯಲ್ಲಿ ಮಲಗಿದರು. ಮಲಗಿಕೊಂಡು ಇಬ್ಬರೂ ಮಾತನಾಡ ತೊಡಗಿದರು.

ಇಂದಿರಾ—ಅಮ್ಮಾ! ಜಮೀನ್ದಾರನ ಮನೆಗೆ ಈಗಲೂ ಹೋಗಿ ಬರವುದುಂಟೋ?

ಸುಲೋಚನಾ—ಹೋಗದೇ ಏನಮ್ಮ! ಬಾಬುಯವರಿಗೆ ದೇಹದಲ್ಲಿ ಸರಿಯಾಗಿಲ್ಲವೆಂದು ಕೇಳಿದಂದಿನಿಂದಲೂ, ನಾನು ಪದೇ ಪದೇ ಅವರ ಯೋಗಕ್ಷೇಮವನ್ನು ತಿಳಿಯುವುದಕ್ಕೋಸ್ಕರ ಹೋಗಿ ಬರುತ್ತಿರುವೆನು. ನಾನು ಮೊದಲು ಅವರ ಮನೆಯಲ್ಲಿಯೇ ಇದ್ದೆನು. ಆ ಮನೆಯ ಜನಗಳನ್ನು ಒಂದು ಕ್ಷಣಕಾಲವೂ ಬಿಟ್ಟಿರುತ್ತಿರಲಿಲ್ಲ. ಬಾಬುಯವರು ಎಷ್ಟು ದಿವಸ ಇಹಲೋಕದಲ್ಲಿ ಜೀವಂತರಾಗಿರುವುರೋ, ಅಲ್ಲಿಯ ವರೆಗೂ ಅವರ ಮನೆಗೆ ಹೋಗದೇ ಉಂಟೆ! ಅವರನಂತರ ಅವರ ಮನೆಯ ಕಡೆಗೆ ಕಣ್ಣೆತ್ತಿಯೂ ನೋಡುವುದಿಲ್ಲ. ಈಗಿನ ಕಾಲದ ಹುಡುಗರಿಗಂತೂ ಮನುಷ್ಯರಿಗೆ ತಕ್ಕ ಮಾನಮರ್ಯಾದೆಗಳೇ ತಿಳಿಯುವುದಿಲ್ಲ. ಹಂದಿಯಂತೆ ತಿನ್ನುವುದು, ಸಂದಿಗೊಂದಿಗಳಲ್ಲಿ ಅಲೆವುದು, ಅವರಿಗೆ ಇವೆರಡೇ ಕೆಲಸಗಳು. ಬಿಡು, ಅವರ ಮಾತೇನು?

ಇಂದಿರೆಯು, "ಇವಳ ಮುಖಾಂತರವಾಗಿಯೇ ನನ್ನ ಕಾರ್ಯಸಾಧನೆಯಾಗ ಬೇಕು" ಎಂದುಕೊಂಡಳು.

ಆಮೇಲೆ ಇಂದಿರೆ ಮತ್ತು ಸುಲೋಚನೆ ಮತ್ತಾವ ಮಾತನ್ನೂ ಆಡ ಲಿಲ್ಲ. ಇಬ್ಬರ ಕಣ್ಣಿಗೂ ನಿದ್ರೆ ಹತ್ತಿತು. ಅವರು ಬೇರೆ ಪ್ರಪಂಚದಲ್ಲಿ ತಂತಮ್ಮ ಅದೃಷ್ಟ ಪರೀಕ್ಷೆಯಿಂದ ಸುಖದುಃಖಗಳನ್ನು ಅನುಭವಿಸ ತೊಡಗಿದರು.

ಬೆಳಗಾಯಿತು. ಸುಲೋಚನೆಯು ಹಾಸಿಗೆಯಿಂದ ಏಳುವುದಕ್ಕೆ ಮುಂಚೆಯೇ ಇಂದಿರೆಯು ಎದ್ದು, ಮನೆಯ ಕೆಲಸವನ್ನು ಮಾಡತೊಡಗಿದಳು. ಮುದುಕಿಯು ಎದ್ದು, ಮನೆಯ ಕೆಲಸವನ್ನು ಇಂದಿರೆಯು ಮಾಡುತ್ತಿರುವುದನ್ನು ನೋಡಿ, ಬಹಳ ಸಂತೋಷಪಟ್ಟಳು. ಸುಲೋಚನೆಯು, ಇಂದಿರೆಯನ್ನು ಕುರಿತು—"ಅಮ್ಮಾ! ನೀನು ಮನೆಯ ಕೆಲಸವನ್ನು ಮಾಡು. ನಾನು ಯಾರ ಹತ್ತಿರವಾದರೂ ಹೋಗಿ ಹೊಟ್ಟೆಗೆ ಏನಾದರೂ ಸಂಪಾದಿಸಿಕೊಂಡು ಬರುವೆನು. ಮನೆಯಲ್ಲಿರುವುದು ಇಬ್ಬ ರಿಗೂ ಸಾಕಾಗುವುದಿಲ್ಲ. ನಾನು ತಾಯಿಯಾಗಿದ್ದು ನಿನಗೆ ಈ ಕದನ್ನವನ್ನು ಹೇಗೆ ಹಾಕಲಿ?" ಎಂದಳು.

ಮುದುಕಿಯ ಮಾತನ್ನು ಕೇಳಿ ಇಂದಿರೆಗೆ ಚಿಂತೆಯು ಹತ್ತಿತು. "ಮುದು ಕಿಯು ಭಿಕ್ಷೆಬೇಡುವುದಕ್ಕೆ ಹೋಗುವಳು. ಅವಳ ಬಾಯಿ ಸುಮ್ಮನಿರುವುದಿಲ್ಲ. ನನ್ನ ವರ್ತಮಾನ ಎಲ್ಲರಿಗೂ ತಿಳಿಯುವುದು. ಗತ್ವಾ ಗತ್ವಾ ಉಪೇಂದ್ರನಾರಾಯಣನ ಕಿವಿಗೂ ಬೀಳುವುದು. ಬಿದ್ದರೆ ತಾನೇ ಏನು! ಅವನ ಇಷ್ಟಾರ್ಥ ಬೇರೆ ನೆರವೇರ ಲಾರದು. ಇಷ್ಟಕ್ಕೆಲ್ಲಾ ನಾನು ಹೆದರುವುದಾದರೆ ನನ್ನ ಪರಿಣಾಮವು ಹೇಗೆ?" ಎಂದು ವಿಧವಿಧವಾಗಿ ಚಿಂತಿಸಿ ಮುದುಕಿಯನ್ನು ಕುರಿತು—"ಅಮ್ಮಾ! ಮಗ ಳಿರುವಾಗ ತಾಯಿಯು ಭಿಕ್ಷೆ ಬೇಡುವುದೆಂದರೇನು? ಜನಗಳು ನಮ್ಮಿಬ್ಬರನ್ನೂ ನಿಂದೆಗೆ ಗುರಿಮಾಡುವರು" ಎಂದಳು.

ಸುಲೋಚನಾ—ತಿರಿದು ತಿಂಬುವವಳಿಗೆ ನಿಂದೆಯೆಂದರೇನಮ್ಮ! ನಾನಾ ದರೋ ಭಿಕ್ಷೆ ಎತ್ತಿಯೇ ತಿನ್ನುವುದು. ನಾಲ್ಕಾರು ಜನ ನನ್ನಲ್ಲಿ ಕನಿಕರವಿಟ್ಟು ಒಂದೊಂದು ಹಿಡಿ ಅಕ್ಕಿ ಹಾಕುವರು. ಅದನ್ನೇ ಅಡಿಗೆ ಮಾಡಿ ತಿಂದು ದಿನವನ್ನು ಕಳೆಯುತ್ತಿರುವೆನು. ಮನೆಯಲ್ಲಿ ಏನಾದರೂ ಇದ್ದೇ ಇರುತ್ತಿತ್ತು. ಈ ದಿನ ವಾದರೋ ಮನೆಯಲ್ಲಿ ಒಂದು ಅಕ್ಕೀಕಾಳೂ ಇಲ್ಲ. ನೀನು ಉಪವಾಸವಿರುವೆ, ಸಾವಕಾಶವಾದರೆ ಭಿಕ್ಷೆ ಸಿಕ್ಕುವುದು ಕಷ್ಟ. ನಾನು ಹೋಗಿಬರುವೆನು.

ಇಂದಿರೆಯು, ಉಪೇಂದ್ರನ ಮನೆಯಲ್ಲಿದ್ದಾಗ, ಅಲ್ಲಿ ಇಲ್ಲಿ ಸಿಕ್ಕುತ್ತಿದ್ದ ಹಣ ಕಾಸುಗಳನ್ನು ಕೂಡಿಹಾಕಿ, ಕೆಲವು ರೂಪಾಯಿಗಳನ್ನು ಉಡಿಯಲ್ಲಿಟ್ಟುಕೊಂ

ಡಿದ್ದಳು. ಅದರಲ್ಲಿ ಐದು ರೂಪಾಯಿಯನ್ನು ತೆಗೆದು ಮುದುಕಿಯ ಕೈಗೆ ಕೊಟ್ಟು- "ಇದನ್ನು ತೆಗೆದುಕೊಂಡು ಪೇಟೆಗೆ ಹೋಗು. ನಿನಗೆ ಬೇಕುಬೇಕಾದ ಸಾಮಾನು ಗಳನ್ನೆಲ್ಲಾ ತೆಗೆದುಕೊಂಡು ಬಾ. ಅದರೊಡನೆ ಉಡುವುದಕ್ಕೆ ನನಗೆ ಒಂದು ಜತೆ ಸೀರೆಯನ್ನೂ ಕೊಂಡು ಕೊಂಡು ಬಾ" ಎಂದಳು.

ಸುಲೋಚನೆಯ ಕೈಯಲ್ಲಿ ಐದುರೂಪಾಯಿ ಬಿದ್ದಿತು. ಅವಳು, ತನ್ನ ಕೈಯಲ್ಲಿ ಒಂದೇ ಗಂಟಿನಲ್ಲಿ ಐದು ರೂಪಾಯಿಗಳು ಇದ್ದುದನ್ನು ಎಂದಿಗೂ ನೋಡಿ ದವಳೇ ಅಲ್ಲ. ಈ ಸುಯೋಗವನ್ನು ನೋಡಿ ಅವಳ ಸಂತೋಷವು ಮೇರೆದಪ್ಪಿತು. ಸಾವಕಾಶಮಾಡಿದರೇನಾಗುವುದೊ, ಎಂದು ಮುದುಕಿಯು ಬೇಗಬೇಗನೆ ಅಂಗಡಿಗೆ ಸಾಮಾನು ತರುವುದಕ್ಕೆ ಹೊರಟು ಹೋದಳು. ಇಂದಿರೆಯು ಮನೆಯಲ್ಲಿದ್ದು ಕೊಂಡು, ಅಲ್ಲಿ ಮಾಡಬಹುದಾದ ಕೆಲಸವನ್ನು ಮಾಡತೊಡಗಿದಳು. ಮಧ್ಯೇ ಮಧ್ಯೇ ತನ್ನೊಳಗೆ ತಾನೇ ಮಾತನಾಡಿಕೊಳ್ಳುವಳು "ನನಗೆ ಸದ್ಯದಲ್ಲಿ ಆಶ್ರ ಯವೇನೋ ಸಿಕ್ಕಿದ ಹಾಗಾಯಿತು. ಮುದುಕಿಗೆ ಇನ್ನೂ ಆಶೆ ತೋರಿಸಿ ನನ್ನ ಕಾರ್ಯವನ್ನು ನೆರವೇರಿಸಿಕೊಳ್ಳಬೇಕು. ಆವನು ಅತ್ಯಾಚಾರದಿಂದ ಪತಿವ್ರತೆಯ ಧರ್ಮವನ್ನು ನಾಶಪಡಿಸಬೇಕೆಂದು ಉದ್ಯುಕ್ತನಾದನೋ, ಅಂತಹವನ ಪ್ರಾಣ ವನ್ನು ತೆಗೆದರೂ ಪಾಪಬರುವುದಿಲ್ಲ. ಈ ವಿಷಯದಲ್ಲಿ ಸುಲೋಚನೆಯು ತಕ್ಕ ವಳಾದ ಹೆಂಗುಸು. ಹೀಗೆ ಹೇಳುತ್ತಿರುವುದರೊಳಗಾಗಿಯೇ, ಸುಲೋಚನೆಯು ಅಂಗಡಿಯಿಂದ ಆಹಾರಸಾಮುಗ್ರಿಯನ್ನೂ, ಸೀರೆಯನ್ನೂ ತಂದಳು. ತಂದವಳು, ಅಡಿಗೆಮಾಡುವುದಕ್ಕೆ ಕುಳಿತಳು ; ಇಂದಿರೆಯು ಅವಳಿಗೆ ಎಲ್ಲವನ್ನೂ ಹವಣಿಸಿ ಕೊಡುತಿದ್ದಳು. ಸ್ವಲ್ಪ ಹೊತ್ತಿನ ಮೇಲೆ ಅಡಿಗೆಯಾಯಿತು. ಇಬ್ಬರೂ ಊಟಮಾಡಿದರು. ಊಟಮಾಡಿದ ಮೇಲೆ ಇಂದಿರೆಯು ಅಲ್ಲಿ ಇಲ್ಲಿ ನೋಡಿದಳು. ಸ್ವಲ್ಪ ದೂರದಲ್ಲಿ ಒಂದು ಚಿಕ್ಕ ದಾದ ಮಚ್ಚುಕತ್ತಿಯು ಬಿದ್ದಿತ್ತು. ಅದನ್ನು ನೋಡಿ, ಇಂದಿರೆಯು, "ಇದೇತಕ್ಕೆ ?" ಎಂದಳು.

ಸುಲೋಚನಾ—ಏನಾದರೂ ಹೆಚ್ಚುಗಿಚ್ಚುವುದಕ್ಕೆ. ಈಗ ಹೆಚ್ಚುವ ಕೆಲಸವಾವುದೂ ಇಲ್ಲ. ಅದೂ ಮಣ್ಣುಹಿಡಿದುಹೋಗಿದೆ.

ಇಂದಿರಾ—ಸಾಣೆ ಹಿಡಿಸಿದರೆ ಕೆಲಸಕ್ಕೆ ಬರಲಾರದೆ ?

ಸುಲೋಚನಾ—ಬರದೇ ಏನು ? ಸಾಣೆ ಹಿಡಿಸುವುದಕ್ಕೆ ದುಡ್ಡೂ ಇಲ್ಲ, ಅದರಿಂದ ಈಗ ಪ್ರಯೋಜನವೂ ಇಲ್ಲ.

ಇಂದಿರಾ—ನಾನು ಅದರಿಂದ ಪ್ರಯೋಜನವನ್ನು ತೋರಿಸುವೆನು. ಅದನ್ನು ಸಾಣೆ ಹಿಡಿಸಿಕೊಂಡು ಬಾ. ಆಮೇಲೆ ಅದನ್ನು ನಾವು ಮಾರಿದರೂ ನಾಲ್ಕು ಕಾಸು ಬರುವುದು. ಅದರಿಂದ ಎರಡು ದಿವಸ ಹೊಟ್ಟೆ ಹೊರೆದರೆ ಅಷ್ಟೇ

ಸಾಕು. ಸಾಣೆ ಹಿಡಿಸುವುದಕ್ಕೆ ನಾನು ದುಡ್ಡು ಕೊಡುತ್ತೇನೆ. ಹೊರಡು, ಈಗಲೇ ಹೋಗಿ ಸಾಣೆ ಹಿಡಿಸಿಕೊಂಡು ಬಾ.

ಇಂದಿರೆಯ ಮಾತಿಗೆ, ಮುದುಕಿಯು ಬಹಳ ಸಂತೋಷಪಟ್ಟಳು. ಅವಳು ಇಂದಿರೆಯನ್ನು ನೋಡಿ—ಒಳ್ಳೆಯದು, ನಾನು ಈಗಲೇ ಹೋಗುವೆನು. ಹತ್ತಿರ ದಲ್ಲಿಯೇ ಒಬ್ಬ ಕೆಲಸಗಾರನಿರುವನು. ಅವನು ಸಾವಕಾಶಮಾಡದೇ ಕೇಳಿದ ಹೊತ್ತಿಗೆ ಮಾಡಿಕೊಡುವನು. ಇದೂ ಅಲ್ಲದೇ ಅವನೂ ವಿಧವಿಧವಾದ ಆಯುಧ ಗಳನ್ನೆಲ್ಲಾ ತಯಾರು ಮಾಡಿ ಮಾರುವನು. ಆ ಆಯುಧಗಳನ್ನು ನೋಡಿದರೆ ಎದೆಯು ನಡುಗುವುದು, ಎಂದಳು.

ಇಂದಿರಾ—ಹಾಗಾದರೆ, ಒಳ್ಳೆಯ ಆಯುಧವಿದ್ದರೆ, ಅದನ್ನೂ ತೆಗೆದು ಕೊಂಡು ಬಾ. ನನಗೀಗ ಒಂದು ಆಯುಧವು ಅಗತ್ಯವಾಗಿ ಬೇಕಾಗಿರುವುದು. ಅವನು ಏನು ಬೆಲೆ ಹೇಳಿದರೂ, ಅದನ್ನು ಕೊಟ್ಟು, ಒಂದು ಚೆನ್ನಾಗಿರುವ ಆಯುಧ ವನ್ನು ಕೊಂಡುಕೊಂಡು ಬಾ.

ಸುಲೋಚನೆಯು, ಚಂದ್ರನಾಥನ ವೃತ್ತಾಂತವನ್ನು ಇದಕ್ಕೆ ಮೊದಲೇ ಕೇಳಿದ್ದಳು. ಅವನ ಪಕ್ಷದ ಜನಗಳು ಲೂಟಿ ಮಾಡಿ ಜೀವನ ಮಾಡುತ್ತಿರುವ ರೆಂದೂ ಕೇಳಿದ್ದಳು. ದೇಶವಿದೇಶಗಳಲ್ಲಿಯೂ ಚಂದ್ರನಾಥನ ಹೆಸರು ಹರಡಿಕೊಂ ಡಿದ್ದಿತು. ಸುಲೋಚನೆಯು ಈ ವಿಷಯವನ್ನು ಜ್ಞಾಪಕಕ್ಕೆ ತಂದುಕೊಂಡು, " ಆಯುಧಗಳನ್ನಿಡುವುದು ಕಳ್ಳರಿಗೋಸ್ಕರವಲ್ಲವೆ ? " ಎಂದಳು.

ಇಂದಿರಾ—ಇಲ್ಲ. ನಾನು ಕಳ್ಳರಿಗೆ ಅಂಜುವವಳಲ್ಲ. ನಾನು ಹೆಂಗುಸು. ಚಂದ್ರನಾಥನಾಗಲಿ, ಅವನ ಕಡೆಯುವರಾಗಲಿ, ಆರೂ ಹೆಂಗುಸರ ಮೇಲೆ ಅತ್ಯಾ ಚಾರ ಮಾಡತಕ್ಕವರಲ್ಲ. ಹಾಗಿದ್ದರೂ ಆಯುಧದಿಂದ ಪ್ರಯೋಜನವಿದೆ.

ಸುಲೋಚನೆಯು ಸ್ವಲ್ಪಹೊತ್ತು ಸುದಾರಿಸಿದ ಬಳಿಕ, ಮಚ್ಚುಕತ್ತಿಯನ್ನು ತೆಗೆದುಕೊಂಡು ಅಂಗಡಿಯ ಕಡೆಗೆ ಹೊರಟಳು. ಮುದುಕಿಯು ಮರೆತುಬಿಡುವು ಳೆಂದು ಇಂದಿರೆಯು, ಆಯುಧದ ವಿಷಯವನ್ನು ಮತ್ತೆ ಜ್ಞಾಪಿಸಿದಳು.

ಕ್ರಮವಾಗಿ ಹಗಲು ಕಳೆಯುತ ಬಂದಿತು. ಸೂರ್ಯದೇವನು ನಿಸ್ತೇಜ ನಾದನು. ಅವನ ಪ್ರಭೆಯು ಮಂಕಾಯಿತು. ಆರಾರು ಅವನ ಪ್ರತಾಪದಿಂದ ತಲೆಯನ್ನು ತಗ್ಗಿಸಿದ್ದರೋ ಅವರೆಲ್ಲರೂ ತಲೆಯನ್ನು ಎತ್ತಿಕೊಂಡರು. ವಾಯುವು ನಿರ್ಭಯವಾಗಿ ಸಂಚಾರಮಾಡಲಾರಂಭಿಸಿತು. ತರುಲತಾ ಗುಲ್ಮಾದಿಗಳು ಮತ್ತೆ ನಗಲಾರಂಭಿಸಿದುವು. ಕತ್ತಲೆಯಾಗುವುದಕ್ಕೆ ಮುಂಚೆಯೇ, ಇಂದಿರೆಯು ಹೇಳಿದ್ದ

ಪದಾರ್ಥವನ್ನು ತೆಗೆದುಕೊಂಡು ಸುಲೋಚನೆಯು ಮನೆಗೆ ಬಂದು ಸೇರಿದಳು. ಇಂದಿರೆಯು ಹೊಸದಾಗಿ ತಂದ ಆಯುಧವನ್ನು ನೋಡಿ, ತನ್ನ ಆಸೆಯು ನೆರವೇರುವುದೆಂದು ಉತ್ಸಾಹಪರಳಾದಳು.

---

## ಹದಿನಾರನೆಯ ಪರಿಚ್ಛೇದ

ರಮೇಶಬಾಬು, ಚಂದ್ರಮಾಮ ಇಬ್ಬರೂ ಹರವಲ್ಲಭನ ಮನೆಯನ್ನು ಬಿಡುವಾಗ ಬಲುಹೊತ್ತಾಗಿದ್ದಿತು. ರಾತ್ರಿ ಹತ್ತು ಗಂಟೆಯ ಸಮಯದಲ್ಲಿ ಇಬ್ಬರೂ ರಮೇಶನ ಮನೆಗೆ ಬಂದರು. ಆ ರಾತ್ರಿ ಚಂದ್ರಮಾಮನು ರಮೇಶನ ಮನೆಯಲ್ಲಿಯೇ ಊಟಮಾಡಿಕೊಂಡು, ಶೋಭನೆಯನ್ನು ಕಂಡು ಮಾತನಾಡಿ ತನ್ನ ಸ್ಥಳಕ್ಕೆ ಹೊರಟು ಹೋದನು. ರಮೇಶನೂ ಊಟ ತೀರಿಸಿಕೊಂಡು ಮಲಗುವುದಕ್ಕೆ ಹೋದನು. ಆ ರಾತ್ರಿ ಬಹಳ ಹೊತ್ತಾಗಿದ್ದುದರಿಂದ, ಯಾರೂ ಯಾವ ಮಾತನ್ನೂ ಆಡಲಿಲ್ಲ. ರಮೇಶನು ದಾರಿ ನಡೆದು ನಡೆದು ಪ್ರಯಾಸಪಟ್ಟಿದ್ದನಾದುದರಿಂದ, ಆ ರಾತ್ರಿ ಅವನಿಗೆ ಚೆನ್ನಾಗಿ ನಿದ್ರೆ ಬರಲಿಲ್ಲ. ಮರುದಿನ ರಮೇಶನು ಎಂದಿನಂತೆ ಊಟಮಾಡಿ, ತನ್ನ ಚಿಕ್ಕಮನೆಯಲ್ಲಿ ಮಂಚದ ಮೇಲೆ ವಿಶ್ರಾಂತಿಗೋಸ್ಕರ ಮಲಗಿಕೊಂಡನು. ಅಷ್ಟು ಹೊತ್ತಿಗೆ ಸರಿಯಾಗಿ, ಸಾವಿತ್ರಿಯು ತಾಂಬೂಲವನ್ನು ತೆಗೆದುಕೊಂಡು, ನಗುತ ನಗುತ ಮೆಲ್ಲ ಮೆಲ್ಲನೆ ಅಲ್ಲಿಗೆ ಬಂದು ಸೇರಿದಳು. ಸಾವಿತ್ರಿಯ ಮುಖವು ಆನಂದದಿಂದ ಪ್ರಫುಲ್ಲವಾಗಿದ್ದಿತು. ಕಣ್ಣುಗಳಲ್ಲಿ ಅನಿರ್ವಚನೀಯವಾದದೊಂದು ಕಾಂತಿಯು ಉಜ್ವಲಿತವಾಗಿದ್ದಿತು. ಕೇಶಪಾಶವು ಉಚ್ಛೃಂಖಲವಾಗಿ ಅಂಗಾಂಗಗಳಲ್ಲಿ ನರ್ತನಮಾಡುತಿದ್ದಿತು. ಆ ಕಾಲದಲ್ಲಿ ಸಾವಿತ್ರಿಯ ಮುಖವನ್ನು ಯಾರಾದರೂ ನೋಡಿದ್ದರೆ, ಎರಡು ಭ್ರಮರಗಳು ಮಧುಪಾನಲೋಲುಪಗಳಾಗಿ, ಶೈವಾಲದಿಂದ ಆಚ್ಛಾದಿತವಾದ ಪ್ರಫುಲ್ಲವಾದ ಕಮಲದಮೇಲೆ ಬಂದು ಕುಳಿತುಕೊಂಡಿವೆಯೋ ಎಂಬಂತೆ ಅವರು ಊಹಿಸುತಿದ್ದರು. ವಸ್ತುತಃ ಸಾವಿತ್ರಿಯು ಆ ವಯಸ್ಸಿನಲ್ಲಿ ರೂಪವತಿಯೇ ಹೌದು. ಆದರೆ ಪ್ರಕೃತಕಾಲದ ರೂಪವಾದರೋ ಅನ್ಯಾದೃಶವಾಗಿ ಕಂಡುಬರುತಲಿದ್ದಿತು.

ರಮೇಶನು ಸಾವಿತ್ರಿಯನ್ನು ನೋಡಿ—ಪ್ರಿಯೆ! ಇದೇನು, ಮುಖದಲ್ಲಿ ಈದಿನ ಎಂದೂ ಇಲ್ಲದ ಒಂದು ಬಗೆಯಾದ ಸೊಬಗು? ಎಂದನು.

ಗಂಡನ ಮಾತನ್ನು ಕೇಳಿದ ಕೂಡಲೆ ಸಾವಿತ್ರಿಗೆ ನಾಚಿಕೆಯುಂಟಾಗಿ ಗಂಡನ ಮೇಲೆ ಒಂದು ಸಣ್ಣ ಕಟಾಕ್ಷವನ್ನು ಬೀರಿ—"ಮನೆಯ ಕೆಲಸವು ಸ್ವಲ್ಪ ಮುಗಿದ ಹಾಗಾಯಿತು. ಮಗುವು ನಿದ್ರೆಮಾಡುತ್ತಿರುವುದು. ಒಂದಾವೃತ್ತಿ ಇಲ್ಲಿ ನೋಡಿಕೊಂಡು ಹೋಗೋಣವೆಂದು ಬಂದೆನು" ಎಂದಳು.

ರಮೇಶ—ನೋಡಿಕೊಂಡು ಹೋಗುವುದೇನು? ಮನಸ್ಸು ಬಂದಾಗ ಬರುವುದು, ಇಲ್ಲದಾಗ ಇಲ್ಲ. ಕಾಲಾಕಾಲಾವಿಲ್ಲದೆ ಇಲ್ಲಿಗೆ ಬರುವುದು ಯಾವ ಧರ್ಮ? ಮಾಡುವುದಕ್ಕೆ ಬೇಕಾದಷ್ಟು ಕೆಲಸವಿದ್ದರೂ, ಅದನ್ನು ಅಲ್ಲಲ್ಲೇ ಬಿಟ್ಟು ಗಳಿಗೆಗೆ ಒಂದಾವೃತ್ತಿ ಅದೇಕೆ ಇಲ್ಲಿಗೆ ಬರುವುದು? ನಿಮ್ಮ ಅತ್ತೆಗೆ ಇದಾವುದೂ ಗೊತ್ತಿಲ್ಲವೆಂದು ಕಾಣುವುದು. ಇರಲಿ, ಅವಳಿಗೆ ಹೇಳಿ ನಿನಗೆ ತಕ್ಕುದಾದ ಕೆಲಸವನ್ನು ಕೊಡಿಸುವೆನು.

ಸಾವಿತ್ರಿ—ನಮ್ಮತ್ತೆಯು ಸರಳಹೃದಯೆಯು. ನನ್ನ ಯೋಗ್ಯತೆ ಅವರಿಗೆ ಚೆನ್ನಾಗಿ ಗೊತ್ತು. ನೀವು ಹೇಳುವುದರಿಂದತಾನೇ ಆಗುವುದೇನು? ನಾನು ಇಲ್ಲಿಗೆ ಬರುವಾಗ ಅವರಿಗೆ ತಿಳಿಸಿಯೇ ಬಂದಿರುವೆನು. ಇಲ್ಲಿಯ ವರೆಗೂ ದೇವಸೇವೆಯನ್ನು ಮಾಡುತಲಿದ್ದೆನು. ದೇವಸೇವೆಗಾದರೋ ತುದಿ ಮೊದಲಿಲ್ಲ. ಎಷ್ಟು ಮಾಡಿದರೂ ಇದ್ದೇ ಇರುವುದು. ಆವಾಗಲೂ ಅದರಲ್ಲಿಯೇ ಇದ್ದುಬಿಟ್ಟರೆ ಪತಿಸೇವೆ ಮಾಡುವುದಾವಾಗ? ನನಗೆ ಪತಿಸೇವೆಯೇ ಎಲ್ಲದಕ್ಕಿಂತಲೂ ದೊಡ್ಡದು. ಎಲ್ಲಿ ಈ ಹೊತ್ತಿನ ಪತಿಸೇವೆಯು ಕೈತಪ್ಪುವುದೋ ಎಂದು ಬೇಗಬೇಗನೆ ಇಲ್ಲಿಗೆ ಬಂದೆನು.

ಸಾವಿತ್ರಿಯ ಮಾತನ್ನು ಕೇಳಿ ರಮೇಶನು, "ಏನೋ ವಿಷಯವಿರಬೇಕು, ಇಲ್ಲದಿದ್ದರೆ ಇಷ್ಟು ಉಪಚಾರವೆಲ್ಲಿಯದು?" ಎಂದು ಭಾವಿಸಿ, ಸಾವಿತ್ರಿಯನ್ನು ಕುರಿತು-"ಎಲೌ! ಸದ್ಗತಿಯನ್ನು ಕೊಡುವ ಪರಮಾತ್ಮನ ಸೇವೆಯೇ ದೊಡ್ಡದು. ಪಾಮರರಾದ ಮನುಷ್ಯರ ಸೇವೆಯಿಂದ ನಮಗೆ ಬರುವ ಪುರುಷಾರ್ಥವೇನು? ನಿನಗೆ ಹುಚ್ಚು ಹಿಡಿದಂತೆ ಕಾಣುತ್ತದೆ." ಎಂದು ಪರಿಹಾಸ ಮಾಡಲಾರಂಭಿಸಿದನು.

ಸಾವಿತ್ರಿಯು, ಮಂಚದ ಮೇಲೆ ರಮೇಶನ ಪಾದದೇಶದಲ್ಲಿ ಕುಳಿತು, ಗಂಡನ ಕಾಲನ್ನು ಒತ್ತಲಾರಂಭಮಾಡಿದಳು. ಮೃದುವಾಗಿ ಕಾಲನ್ನು ಒತ್ತುತ್ತಾ ಗಂಡನನ್ನು ಕುರಿತು—"ಪ್ರಿಯನೆ! ಶೋಭನೆಯ ಮದುವೆ ಏನಾಯಿತು? ಶೋಭನೆಯನ್ನು ಹರವಲ್ಲಭನ ಮಗನ ಕೈಯಲ್ಲಿ ಕೊಟ್ಟುಬಿಡುವಂತೆ ನಿಶ್ಚಯವಾಯಿತೇನು?" ಎಂದು ಪ್ರಶ್ನೆಮಾಡಿದಳು.

ರಮೇಶ—ನಮ್ಮ ಮಗಳನ್ನು ಸ್ವೀಕಾರಮಾಡುವುದರಲ್ಲಿ ಹರವಲ್ಲಭನಿಗೆ ಸಂಪೂರ್ಣಾಭಿಪ್ರಾಯವುಂಟು. ಅವರ ಸಂಬಂಧವನ್ನು ಬಳೆಯಿಸುವುದರಲ್ಲಿ ನನಗೂ ತುಂಬಾ ಇಷ್ಟ. ಆದರೆ ವಿವಾಹವು ಸಾವಕಾಶವಾಗಬಹುದು.

ಸಾವಿತ್ರಿ—ಅದೇನು?

ರಮೇಶ—ಹರವಲ್ಲಭನು ರೋಗಪೀಡಿತನಾಗಿರುವನು. ಅವನು ರೋಗದಿಂದ ಬಿಡುಗಡೆಯಾಗದಿದ್ದರೆ ವಿವಾಹವು ನಡೆಯುವ ಸಂಭವವಿಲ್ಲ.

ಸಾವಿತ್ರಿ—ಈಮಾತು ಕೇಳಿದರೆ ನನಗೇನೋ ಆಶ್ಚರ್ಯವಾಗುವುದು. ಹರವಲ್ಲಭನು ರೋಗದಿಂದ ಮುಕ್ತನಾದಾನೇ ?

ರಮೇಶ—ರೋಗವೇನೋ ಬಲವಾದುದು, ಆದರೂ ಪ್ರಾಣಭಯವು ಕಂಡುಬರುವುದಿಲ್ಲ. ಅವನಿಗೆ ಸ್ವಲ್ಪ ಗುಣ ಕಂಡುಬಂದರೂ, ಮದುವೆಯು ಸಾವಕಾಶ ವಾಗಲಾರದು.

ಸಾವಿತ್ರಿ—ಕೆಲಸವು ಸಂದೇಹಕ್ಕಿಟ್ಟಿತು. ಹರವಲ್ಲಭನಿಗೆ ಮಹತ್ತರವಾದ ರೋಗ ವಾಸಿಯಾಗಬೇಕಾಗಿದ್ದರೆ ಬಹುಕಾಲ ಹಿಡಿಯುವುದು. ಅಲ್ಲಿಯವರೆಗೂ ಶೋಭನೆಯು ವಿವಾಹವಿಲ್ಲದೇ ಇರಬೇಕು. ಅವಳಿಗಾದರೋ ವಿವಾಹಕಾಲವು ಮೀರುತ್ತ ಬಂದಿದೆ. ಇದೂ ಅಲ್ಲದೆ, ಅತ್ತೆಯವರಿಗೆ ವಯಸ್ಸಾಯಿತು. ಅವರು ಈ ವಿವಾಹವು ಬೇಗ ಆದುದನ್ನು ನೋಡಿ ಸಂತೋಷ ಪಡಬೇಕೆಂದಿರುವರು.

ರಮೇಶ—ತಾಯಿಗೇನೋ ಇಷ್ಟ, ನಿಜ. ಆದರೆ ಏನುಮಾಡುವುದಕ್ಕಾಗುವುದು ? ಹರವಲ್ಲಭನಿಗೆ ಒಂದು ವಿಧವಾಗಿ ಮಾತು ಕೊಟ್ಟುದಾಯಿತು. ಸಾವಕಾಶವಾದರೂ ಸಹಿಸಬೇಕಾದ ವಿಷಯವಾಗಿದೆ.

ಸಾವಿತ್ರಿಗೆ ದಿಕ್ಕೇ ತೋರದಂತಾಯಿತು. ಅವಳು ಗಂಡನ ಮಾತಿಗೆ ಏನೊಂದುತ್ತರವನ್ನೂ ಹೇಳಲಾರದವಳಾಗಿ, ಮತ್ತೆ ಗಂಡನ ಕಾಲನ್ನು ಒತ್ತಲು ಪಕ್ರಮಿಸಿದಳು.

ರಮೇಶನು, ಸಾವಿತ್ರಿಯು ವ್ಯಸ್ತಳಾಗಿರುವುದನ್ನು ನೋಡಿ, " ಪ್ರಿಯೆ ! ಈ ಮದುವೆಯು ಜಾಗ್ರತೆಯಾಗುವುದು ನಿನ್ನ ಅಭಿಪ್ರಾಯವೆ? ಎಂದು ಕೇಳಿದನು.

ಸಾವಿತ್ರಿ—ಇದರಲ್ಲಿ ತಮ್ಮ ಅಭಿಪ್ರಾಯವೇನು ? ತಾವೇ ನನಗೆ ಸ್ವಾಮಿ, ದೇವತಾ. ತಮಗಿಂತಲೂ ನಾನು ವಿಶೇಷ ಅರಿತವಳಲ್ಲ. ನನ್ನ ಅಭಿಪ್ರಾಯ ಕಟ್ಟಿಕೊಂಡು ಆಗುವುದೇನು ? ಈ ವಿವಾಹದಲ್ಲಿ ಅತ್ತೆಗೆ ಅಭಿಪ್ರಾಯವಿಲ್ಲ.

ಈ ಮಾತು ಕೇಳಿ ರಮೇಶನಿಗೆ ಸ್ವಲ್ಪ ಚಿಂತೆಗೆ ಬಂತು. " ತಾಯಿಯನ್ನು ಕೇಳದೆ ಯಾವ ಕೆಲಸ ಮಾಡುವುದೂ ಯುಕ್ತವಲ್ಲ, ಆದಕಾರಣ ಸಾವಿತ್ರಿಯ ಅಭಿಪ್ರಾಯವನ್ನೇ ಕೇಳಿ ತಿಳಿದುಕೊಳ್ಳುವೆನು " ಎಂದು ಸಾವಿತ್ರಿಯ ಕಡೆ ತಿರುಗಿ " ಅದೇನು ಕಾರಣ ತಾಯಿಗೆ ಅಭಿಪ್ರಾಯವಿಲ್ಲ ?" ಎಂದನು.

ಸಾವಿತ್ರಿ—ಹರವಲ್ಲಭನ ಮಗನ ಸ್ವಭಾವವು ಒಳ್ಳೆಯದಲ್ಲವೆಂದು ಅತ್ತೆಯವರು ಕೇಳಿರುವರು. ನಾನೂ ಕೇಳಿರುವೆನು. ಶೋಭನೆಯು ನಮಗೆ ಏಕಮಾತ್ರ ಪುತ್ರಿಯು. ಅವಳನ್ನು ಅಪಾತ್ರದಲ್ಲಿ ದಾನಮಾಡುವುದಾದರೆ ಮುಂದೆ ಬಲು ಪಶ್ಚಾತ್ತಾಪಪಡಬೇಕಾಗುವುದು. ಅಪಾತ್ರದಲ್ಲಿ ದಾನಮಾಡುವುದರಿಂದ ಕನ್ನೆಗೆ ದುಃಖವೋ ಸಂತೋಷವೋ ಅದು ಹಾಗಿರಲಿ, ಕನ್ನೆಯ ತಾಯಿತಂದೆಗಳ ದುಃಖವು ಹೇಳಲಸಾಧ್ಯ. ಬದುಕಿರುವ ವರೆಗೂ ಅವರು ಕೊರಗಿಯೇ ಸಾಯಬೇಕು. ಗುಣಾಢ್ಯನಾದ ವರನು ದರಿದ್ರನಾದರೂ ಉತ್ತಮವೆ. ಹಣಗಾರನೆಂದು ನೀಚನಾದ ವರನಿಗೆ ಕನ್ಯೆಯನ್ನು ದಾನಮಾಡುವುದು ಕೇವಲ ಅನ್ಯಾಯ. ಒಂದಾನೊಂದು ಕಾಲದಲ್ಲಿ ಈ ವಿಷಯಗಳನ್ನು ತಮ್ಮಿಂದಲೇ ಕೇಳಿ ತಿಳಿದುಕೊಂಡಿದ್ದೆನು.

ಈ ಹೊತ್ತಿಗೆ ಸರಿಯಾಗಿ ಚಂದ್ರಮಾಮನ ಮಾತು ಜ್ಞಾಪಕಕ್ಕೆ ಬಂದಿತು. ಸಾವಿತ್ರಿಯು ಹೇಳುವ ಮಾತೆಲ್ಲವೂ ನಿಜವಾದುದೆಂದು ರಮೇಶನ ಮನಸ್ಸಿಗೆ ಬಂತು.

ಪ್ರಭಾತವಾಯುವಿನಿಂದ ಸಂತಾಡಿತವಾದ ನವಪಲ್ಲವದಂತೆ ರಮೇಶನ ಮನಸ್ಸು ಡೋಲಾಯಮಾನವಾಯಿತು. ರಮೇಶನು ಚಿಂತಿಸಲಾರಂಭಿಸಿದನು— "ನಿಜವಾಗಿಯೂ ಹರವಲ್ಲಭನ ಮಗನು ದುಶ್ಚರಿತ್ರನಾಗಿದ್ದರೆ, ನನ್ನ ಮಗಳನ್ನು ಕೊಟ್ಟು ವಿವಾಹಮಾಡುವುದು ಸರ್ವಥಾ ಯುಕ್ತವಾಗಿ ಕಂಡುಬರುವುದಿಲ್ಲ. ನನ್ನ ಮಗಳು ನನ್ನ ಕಣ್ಣೆದಿರಿಗೆ ದುಃಖಪಡುತಿರುವುದನ್ನು ತಂದೆಯಾದ ನಾನು ಸಹಿಸಬಲ್ಲೆನೆ ! ಇದೆಂದಿಗೂ ಆಗಲಾರದು. ನಾನು ಪೂರ್ವಾಪರವನ್ನರಿಯದೆ ಹರವಲ್ಲಭನಿಗೆ ಮಾತುಕೊಟ್ಟೆನು, ಬೇರೇ ಕಡೆಗೆ ಮದುವೆ ಮಾಡಿದರೆ, ಭಾಷೆ ಕೊಟ್ಟು ತಪ್ಪಿದಂತಾಗುವುದಲ್ಲ ! ಈ ಮದುವೆಯಲ್ಲಿ ತಾಯಿಗೂ ಇಷ್ಟವಿಲ್ಲ, ನನ್ನ ಹೆಂಡಿತಿಗೂ ಇಷ್ಟವಿಲ್ಲ. ಯಾರಿಗೂ ಸಮ್ಮತವಲ್ಲದ ಕೆಲಸದಲ್ಲಿ ನಾನು ಸಿಕ್ಕಿದೆನಲ್ಲ! ದೇವರು ಮಾಡಿಸಿದಂತಾಗಲಿ. ಮತ್ತೆ ಹೆಂಡಿತಿಯನ್ನೇ ಕೇಳುವೆನು" ಎಂದು ಸಾವಿತ್ರಿಯ ಕಡೆ ನೋಡಿ—"ಹರವಲ್ಲಭನು, ದೊಡ್ಡ ಜಮೀನ್ದಾರನು. ಅವನ ಮಗನಿಗೆ ಶೋಭನೆಯನ್ನು ಕೊಟ್ಟರೆ ಸುಖವಾಗಿರುವುದಿಲ್ಲವೆ?" ಎಂದನು.

ಇದನ್ನು ಕೇಳಿ ಸಾವಿತ್ರಿಯು ಸ್ವಲ್ಪ ನಕ್ಕಳು. ಆ ನಗುವು ನಿಜವಾದ ನಗುವಾಗಿರಲಿಲ್ಲ. ರಮೇಶಬಾಬುವಿಗೆ ಈ ನಗುವಿನ ಮರ್ಮವು ಗೊತ್ತಾಗದೆ ಹೋಯಿತು.

ಸಾವಿತ್ರಿ—ವಿವಾಹದ ಉದ್ದೇಶವೇನು ? ಲೋಕದಲ್ಲಿ ಕೆಲವರು, ಅನ್ನಬಟ್ಟೆಗೆ ಇದ್ದರೆ ಸಾಕೆಂದು ಮಕ್ಕಳನ್ನು ಮದುವೆ ಮಾಡಿಬಿಡುವರು. ದರಿದ್ರ

ರಾಗಲಿ, ಹಣಗಾರರಾಗಲಿ. ಯೋಗ್ಯತಾನುಸಾರವಾಗಿ ಅನ್ನಬಟ್ಟೆಯನ್ನು ಕೊಟ್ಟೇ ಕೊಡುವರು. ನಮ್ಮಪ್ಪನು ನನಗೆ ಮದುವೆ ಮಾಡುವಾಗ, ಅಳಿಯನಿಗೆ ಏನಿದೆ ಎಂದು ವಿಚಾರಿಸಿ, ಮದುವೆ ಮಾಡಿದನು? ಆಗಿನ ಸ್ಥಿತಿಯನ್ನೂ ಈಗಿನ ಸ್ಥಿತಿ ಯನ್ನೂ ಸ್ವಲ್ಪ ವಿಚಾರಿಸಿ ನೋಡೋಣವಾಗಲಿ.

ಹೀಗೆಂದು ಹೇಳಿ ಒಂದಾವೃತ್ತಿ ಗಂಡನನ್ನು ನೋಡಿ, ಒಂದು ವಿಧವಾದ ನಗುವನ್ನು ನಕ್ಕಳು. ರಮೇಶನ ಮುಖದಲ್ಲಿಯೂ ಒಂದು ಸಣ್ಣದಾದ ನಗುವು ಆವಿರ್ಭವಿಸಿ ತತ್ಕ್ಷಣವೇ ಎಲ್ಲಿಯೋ ಮಾಯವಾಗಿ ಹೋಯಿತು. ಸಾವಿತ್ರಿಯು ಮತ್ತೆ ಮಾತನಾಡತೊಡಗಿದಳು:—"ಸಂಸಾರವು ಅನುಕೂಲದಾಂಪತ್ಯದಿಂದ ಶೋಭಿಸುವುದೇ ಹೊರತು ಭಾಗ್ಯದಿಂದಲ್ಲ, ಬಡತನದಿಂದಲ್ಲ. ಎಷ್ಟೋ ಬಡ ಸಂಸಾರಗಳಲ್ಲಿ ಗುಣಾಢ್ಯರಾದ ಗಂಡಹೆಂಡಿರು ಸ್ವರ್ಗಸುಖವನ್ನೇ ಅನುಭವಿಸಿರು ವರು. ಐಶ್ವರ್ಯವಂತರ ಸಂಸಾರವನ್ನು ನಾವು ಪದೇಪದೇ ನೋಡುತಲಿರುವೆವು. ಅದು ಹೊರಗೆ ನೋಡುವುದವಕ್ಕೆ ಚೆನ್ನವೇ ಹೊರತು ಒಳಗೆ ನೋಡಿದರೆ ಅದ ಕ್ಕಿಂತಲೂ ನರಕ ಬೇರೆ ಇಲ್ಲ. ಐಶ್ವರ್ಯದಿಂದ ಅನೇಕ ದುರ್ಗುಣಗಳುಂಟಾಗಿ ಎಷ್ಟೋ ಸಂಸಾರಗಳು ಕುಲಗೆಟ್ಟು ಹೋಗಿರುವುವು. ಅಂತವರಲ್ಲಿ ಸಾವಿರಕ್ಕೊಬ್ಬರು ಯೋಗ್ಯರು ಸಿಕ್ಕಬಹುದು. ಸುಖದುಃಖಗಳಲ್ಲಿ ಗಂಡಹೆಂಡಿರು ಪರಸ್ಪರ ಸಹಾಯಕ ರಾಗದಿದ್ದ ಮೇಲೆ ಅದೆಂತಹ ಸಂಸಾರ! ಅನ್ಯೋನ್ಯವಾಗಿ ನಿರ್ದುಷ್ಟವಾದ ಪ್ರೀತಿಯೊಂದಿದ್ದರಲ್ಲವೇ ಸಂಸಾರವು ಚಿರಕಾಲ ನಡೆಯುವುದು. ಹಣಕಾಸು ಗಳಿಂದ ಅಂತಹ ಪ್ರೀತಿಯುಂಟಾಗಲಾರದು. ಉಂಟೆಂದು ಹೇಳುವುದಾದರೆ, ಅದು ಲೋಭಮೂಲವಾದ ಕಪಟಪ್ರೀತಿಯೇ ಹೊರತು ನಿಜವಾದ ಪ್ರೀತಿಯು ಎಂದಿಗೂ ಆಗಲಾರದು. ಪ್ರೀತಿಯು ಹಣ, ಒಡವೆ, ವಸ್ತ್ರ, ಆಹಾರ, ಮುಂತಾ ದವುಗಳಿಂದ ಉಂಟಾಗಲಾರದು," ಎಂದು ಮುಂತಾಗಿ ಸಾವಿತ್ರಿಯು ತನಗೆ ತೋರಿ ಬಂದುದನ್ನೆಲ್ಲಾ ಗಂಡನಿಗೆ ತಿಳಿಸಿಬಿಟ್ಟಳು.

ರಮೇಶನು, ತನ್ನ ಹೆಂಡಿತಿಯ ವಾಗ್ವೈಖರಿಯನ್ನು ಒಂದೇ ಮನಸ್ಸಿನಿಂದ ಕೇಳುತಿದ್ದವನು, ಸಾವಿತ್ರಿಯ ಮಾತು ಪೂರೈಸಿದೊಡನೆಯೇ ಅವಳನ್ನು ವಿಧವಿಧ ವಾಗಿ ಮುತ್ತಿಟ್ಟುಕೊಂಡನು. ಸಾವಿತ್ರಿಯೂ ಪ್ರೈಯುಬ್ಬಿ, ಗಂಡನ ಕಪೋಲ ದೇಶದಲ್ಲಿ ಮುತ್ತುಗಳ ಮಳೆಯನ್ನೇ ಕರೆದುಬಿಟ್ಟಳು. ಇಷ್ಟೇ ಸಾಲದೇ, ರಮಣಿ ಯರಿಗೆ ಸ್ವಭಾವಸಿದ್ಧವಾದ ಅಸ್ತ್ರಶಸ್ತ್ರಗಳನ್ನೆಲ್ಲಾ ಪ್ರಯೋಗಮಾಡಿಬಿಟ್ಟಳು. ರಮೇಶನು ಅಸ್ತ್ರಗಳ ಪೆಟ್ಟಿಗೆ ನಿಲ್ಲಲಾರದೆ ಸೋತುಹೋದನು. ಇದೇ ಸಮಯ ವೆಂದು ರಮಣೀಮಣಿಯು ಬಾಹುಗಳ ಕೋಮಲವಾದ ಪಂಜರದಲ್ಲಿ ರಮೇಶನನ್ನು ಬದ್ಧನನ್ನಾಗಿ ಮಾಡಿದಳು. ರಮೇಶನು ಅದರಿಂದ ಮುಕ್ತನಾಗಲು ಉಪಾ ಯಾಂತರಗಳನ್ನು ಅರಿಯದೇ ಸಾಹಸಪಡಲಾರಂಭಿಸಿದನು.

ಸಾವಿತ್ರಿಯು, ಒಂದೊಂದುವೇಳೆ, ಸ್ವಾಮಿಯ ಪಾದಸೇವೆಯನ್ನು ಮಾಡುತ್ತಲೂ, ಮಾತುಗಳ ಸಂದರ್ಭದಲ್ಲಿ ಕಿವಿಯ ಚಳತುಂಬನ್ನು ಅಲುಗಾಡಿಸುತ್ತಲೂ ಒಂದೊಂದುವೇಳೆ ತನ್ನ ರತ್ನಾಭರಣಗಳ ಧ್ವನಿಯನ್ನು ಮಾಡುತ್ತಲೂ, ತಾಂಬೂಲ ರಾಗರಂಜಿತವಾದ-ರಕ್ತೋತ್ಪಲಕ್ಕೆ ಸದೃಶವಾದ ತುಟಿಗಳಲ್ಲಿ ನಾಚಿಕೆಯಿಂದ ಕೂಡಿದ ಮುಗುಳುನಗೆಯನ್ನು ಪ್ರಕಾಶ ಮಾಡುತ್ತಲೂ, ಮತ್ತೊಂದುವೇಳೆ, ಗಂಡನ ಕೈಯನ್ನು ತನ್ನ ಕೈಗಳಿಂದ ಹಿಡಿದು ಕೊಳ್ಳುತ್ತಲೂ, ರಮೇಶನ ಹೃದಯ ದುರ್ಗದಲ್ಲಿ ಅಧಿಕಾರ ಮಾಡತೊಡಗಿದಳು. ಮೋಹನಾಂಗಿಯರ ಈ ರೀತಿಯಾದ ಸಮ್ಮೋಹನಾಸ್ತ್ರವು, ಆವ ಭಾಗ್ಯಶಾಲಿಯಾದ ಪುರುಷನ ಮೇಲೆ ಪ್ರಯೋಗ ಮಾಡಲ್ಪಡುವುದೋ, ಅವನು ಸನ್ಯಾಸಿಯೇ ಆಗಲಿ, ವಿರಕ್ತನೇ ಆಗಲಿ, ಯೋಗೀಶ್ವರನೇ ಆಗಲಿ, ಅವನಾರೇ ಆಗಲಿ, ಇಂದ್ರಿಯ ವ್ಯಾಪಾರಕ್ಕೆ ಪರವಶನಾಗಿ ಕರಗಿ ನೀರಾಗುವನು. ಸ್ತ್ರೀ ವಾಚಕರೆ! ಜಗತ್ತಿನಲ್ಲಿ ಅಂತಹರೇ ಧನ್ಯರು. ನಾರೀಜನ್ಮವೇ ಧನ್ಯ. ಅವರ ಶಕ್ತಿಯೇ ಶ್ಲಾಘ್ಯವಾದುದು. ಅವರ ಕೆಲಸವೇ ಕೆಲಸ, ಅವರ ಪತಿ ಪ್ರೇಮವೇ ಧನ್ಯವು. ಜಗತ್ತಿನಲ್ಲಿ ನೀವೇ ದೇವತಾಸ್ವರೂಪರು. ನಿಮ್ಮಿಂದಲೇ ಜಗತ್ತು ಈ ಹೊತ್ತಿನ ವರೆಗೂ ಕಾರ್ಯಶಕ್ತಿಯನ್ನು ಹೊಂದಿರುವುದು. ಜನಗಳು, ಜನಾಂಗಗಳು ಹತೋಟಿಯಲ್ಲಿರುವುದೂ ನಿಮ್ಮಿಂದಲೇ. ನೀವು ಇದ್ದುಕೊಂಡು ನಿಮ್ಮ ಅಮೃತಮಯವಾದ ನಡೆನುಡಿಗಳಿಂದ ದುಃಖಮಯವಾದ ಸಂಸಾರವನ್ನು ಕೂಡ ನಂದನವನದಂತೆ ಮಾಡಿ, ಗಂಡಸರನ್ನು ಸಕಲ ದುಃಖಗಳಿಂದ ಪಾರು ಮಾಡುವಿರಿ. ನಾರೀ ಜನ್ಮವೇ ಜಗತ್ತಿನಲ್ಲೆಲ್ಲಾ ಸಾರಭೂತವಾದ ಜನ್ಮವು. ಮಾರಿಯರ ವಿಚಾರವದಂತಿರಲಿ.

ಸಾವಿತ್ರಿಯನ್ನು ನೋಡಿ, ರಮೇಶನು ಮಂತ್ರ ಮುಗ್ಧವಾದ ಸರ್ಪದಂತೆ, ಬಾಹ್ಯೇಂದ್ರಿಯ ವ್ಯಾಪಾರಶೂನ್ಯನಾದನು. ಎಲ್ಲೆಲ್ಲಿ ನೋಡಿದರೂ, ಅವನಿಗೆ ಸಾವಿತ್ರಿಯೇ ಕಂಡುಬರುತಿದ್ದಳು. ಬಾರಿಬಾರಿಗೂ ಬರೆಯುವುದಕ್ಕೆ ನಾಚಿಕೆಯಾಗುವುದು. ಆದರೆ ಯತ್ನವಿಲ್ಲ. ನಡೆದ ಸಂಗತಿಯನ್ನು ಹೇಳದಿದ್ದರೆ, ವಾಚಕರ ಕೋಪಕ್ಕೆ ಪಾತ್ರವಾಗಬೇಕಾಗುವುದು. ಹೇಳಿದುದನ್ನೇ ಹೇಳುವುದರಿಂದ ಜನಗಳಿಗೆ ಅಸಹ್ಯವುಂಟಾಗಬಹುದು. ಮಾಡುವವರಿಗೇ ಅಸಹ್ಯವುಂಟಾಗದೇ ಹಿತವಾಗಿರುವಾಗ ನಾವು ಬರೆಯುವುದು ಕೂಡ ಜನಗಳಿಗೆ ಅಪ್ರೀತಿದಾಯಕವೆಂದು ನಾವು ಎಂದಿಗೂ ನಂಬಲಾರೆವು. ಗುಣವೋ ದೋಷವೋ, ನಮಗೆ ಅದು ಗೊತ್ತಿಲ್ಲ, ನಾವೇನೋ ನಡೆದುದನ್ನು ತಿಳಿಯಪಡಿಸುವುದಕ್ಕೋಸ್ಕರ ಹಸ್ತದಲ್ಲಿ ಲೇಖನಿಯನ್ನು ಧಾರಣಮಾಡಿರುವೆವು. ಬರೆಯುವಾಗ ವಿಷಯಗಳು ತಾವಾಗಿಯೇ ಜ್ಞಾಪಕಕ್ಕೆ ಬರುವುವು. ನಾವೂ ಬರೆದುಬಿಡುವೆವು. ರಮೇಶನು, ಸಾವಿತ್ರಿಯ ಪ್ರೇಮ ಮಧುರವಾದ ಮುಖಮಂಡಲವನ್ನು ಎರಡು ಕೈಯಲ್ಲಿಯೂ ಹಿಡಿದುಕೊಂಡು,

ಅನೇಕಾನೇಕ ಮುತ್ತುಗಳಿಂದ ಅಲಂಕಾರಮಾಡತೊಡಗಿದನು. ಇಬ್ಬರೂ ಜಯಾಪೇಕ್ಷೆಯಿಂದ ಯುದ್ಧಮಾಡಿದರು. ಜಯಲಕ್ಷ್ಮಿಯು ರಮೇಶನ ಕಡೆಗೆ ತಿರುಗಿದಳು. ಸಾವಿತ್ರಿಯು ತನಗೆ ಅಪಜಯವಾದುದನ್ನು ಕಂಡು, ಗಂಡನನ್ನು ಕುರಿತು "ಏನು ಪರಾಕ್ರಮ ! ಸ್ವಭಾವತಃ ಅಬಲೆಯಾದ ಸ್ತ್ರೀಯನ್ನು ಜಯಿಸಿ, ಸಮರಶೂರರೆಂದು ವಿಜಯಪತಾಕೆಯನ್ನು ಸ್ಥಾಪನೆ ಮಾಡಿದಿರಿ. ಶಕ್ತಿಗೆ ತಕ್ಕ ಕೆಲಸವನ್ನೇ ಮಾಡಿದಂತಾಯಿತು. ತಾವು ಇಷ್ಟು ಪರಾಕ್ರಮಶಾಲಿಗಳೆಂದು ನನಗೆ ತಿಳಿದಿರಲಿಲ್ಲ. ಹಾಗೆ ತಿಳಿದಿದ್ದರೆ ನಾನು ತಮ್ಮೊಡನೆ ದ್ವಂದ್ವಯುದ್ಧಕ್ಕೆ ಪ್ರಾರಂಭವೇ ಮಾಡುತ್ತಿರಲಿಲ್ಲ. ಕಾರ್ಯವೇನೋ ನಡೆದುಹೋಯಿತು. ನಾನು ಹೆಚ್ಚಾಗಿ ಮಾತನಾಡಿದರೆ, ಸೋತವರು ಮಾತನಾಡುವಂತೆ ಮಾತನಾಡುವೆಯೆಂದು ನನ್ನನ್ನು ಬೇರೆ ಹಾಸ್ಯಮಾಡಿಬಿಡುವಿರಿ. ನಾನೇನೋ ಸೋತೆನು. ಸೋತವರು ಮಾತನಾಡದೇ ಮೌನವಾಗಿರುವುದೇ ಯುಕ್ತವಾದುದು" ಎಂದು ಪ್ರೇಮಗರ್ಭಿತವಾದ ಮೃದುಮಧುರವಾದ ನುಡಿಗಳನ್ನು ಆಡಿದಳು.

ರಮೇಶನು ನೋಡಿದನು. ಸಾವಿತ್ರಿಯು, ಕ್ರಮವಿಲ್ಲದೆ ದೇಹದಲ್ಲಿ ಎಲ್ಲೆಲ್ಲಿಯೂ ಆವರಿಸಿಕೊಂಡಿದ್ದ ಕೇಶರಾಶಿಯನ್ನು ಕೈಗಳಿಂದ ಸರಿಮಾಡಿಕೊಳ್ಳುತಿದ್ದಳು. ಆ ಅವಸ್ಥೆಯಲ್ಲಿದ್ದ ಸಾವಿತ್ರಿಯನ್ನು ಮತ್ತೆ ದೃಢವಾಗಿ ಆಲಿಂಗನೆಮಾಡಿಕೊಂಡು, ರಮೇಶನು "ನಿಮ್ಮಿಬ್ಬರ ಅಭಿಪ್ರಾಯವನ್ನೂ ತಿಳಿದುಕೊಳ್ಳದೇ ಶೋಭನೆಯ ವಿವಾಹದ ವಿಚಾರದಲ್ಲಿ ನನ್ನ ಬುದ್ಧಿಯೋಡುವುದಿಲ್ಲ. ನನ್ನ ತಾಯಿಯ ಅಭಿಪ್ರಾಯವನ್ನು ಅವಳಿಂದಲೇ ತಿಳಿದುಕೊಳ್ಳುವೆನು. ನಿನ್ನ ಅಭಿಪ್ರಾಯವೇನು ? ತಿಳಿಸು" ಎಂದನು. ಸಾವಿತ್ರಿಯು ಹೇಳತೊಡಗಿದಳು—

"ಶೋಭನೆ, ನಮ್ಮತ್ತೆ ಇವರ ಅಭಿಪ್ರಾಯವಾವುದೋ ಅದೇ ನನ್ನ ಅಭಿಪ್ರಾಯ. ಶೋಭನೆಯು, ಬಂದೀಪುರದಲ್ಲಿರುವ ನರೇಂದ್ರನಾಥನನ್ನು ಬಹಳವಾಗಿ ಪ್ರೀತಿಸುವಳು. ಅವಳನ್ನು ಅವನಿಗೆ ಕೊಟ್ಟು ವಿವಾಹ ಮಾಡುವುದೇ ನನಗೆ ಇಷ್ಟ. ನರೇಂದ್ರನಂತೆ ಸುಚರಿತ್ರನಾದ ಬಾಲಕನು ದೊರೆಯುವುದು ಅತಿ ವಿರಳ. ಅಂತಹವನ ಕೈಯಲ್ಲಿ ಶೋಭನೆಯನ್ನು ಅರ್ಪಣಮಾಡುವುದಾದರೆ, ನಮ್ಮ ಮಗಳ ಸುಖಕ್ಕೆ ಪಾರವೇ ಇರುವುದಿಲ್ಲ," ಎಂದು ಹೇಳುತ, ಶೋಭನೆಯು ನರೇಂದ್ರನಿಗೆ ಬರೆದ ಕಾಗದದ ಸಂಗತಿಯನ್ನೂ, ಶೋಭನೆಯೂ ನರೇಂದ್ರನೂ ಏಕಾಂತವಾಗಿ ಮಾತನಾಡುತಿದ್ದ ಸಂಗತಿಯನ್ನೂ ಚಾರುಚೂರು ಬಿಡದೆ ಗಂಡನಿಗೆ ತಿಳಿಸಿದಳು.

ಈ ಮಾತನ್ನು ಕೇಳಿ ರಮೇಶನಿಗೆ ಪರಮಾನಂದವುಂಟಾಯಿತು. ಆದರೆ ನರೇಂದ್ರನ ತಂದೆಯ ದುರವಸ್ಥೆಯನ್ನು ನೋಡಿ, ಅವನ ಮನಸ್ಸು ಸ್ವಲ್ಪ ವಿಷಣ್ಣಭಾವವನ್ನು ತಾಳಿತು.

## ಹದಿನೇಳನೆಯ ಪರಿಚ್ಛೇದ

ದಿನವು ಕಳೆದು ಹೋಯಿತು. ಮತ್ತೊಂದು ದಿನವು ಬಂದಿತು. ಅದೂ ಕಳೆದು ಹೋಗುವುದು. ಹೀಗೆಯೇ ಎಷ್ಟೋ ದಿನಗಳು ಕಳೆದುಹೋಗುವುವು. ಮುಂದೆ ಎಷ್ಟೋ ದಿನಗಳು ಕಳೆದುಹೋಗುವುದಕ್ಕೆ ಕಾದಿರುವುವು. ಇವು ಯಾರ ಸ್ವಾಧೀನ ದಲ್ಲಿಯೂ ಇಲ್ಲ. ಇವುಗಳ ಮೇಲೆ ಯಾರ ಆಧಿಪತ್ಯವೂ ಸಾಗದು. ಆವನು ಏಕಚ್ಛತ್ರಾಧಿಪತಿಯೋ ಅವನ ದಿನವೂ ಕಳೆದುಹೋಗುವುದು. ಆವನು, ಕೇವಲ ದರಿದ್ರನಾಗಿ ಅತಿಪ್ರಯಾಸದಿಂದ ತಿರಿದು ತಿನ್ನುವನೋ, ಅವನ ದಿನವೂ ಕಳೆದುಹೋಗುವುದು. ಧರ್ಮಿಷ್ಠನ ದಿನವೂ ಕಳೆದುಹೋಗುವುದು. ಅತ್ಯಾಚಾರಿಯಾದ ಕ್ರೂರ ಮನುಷ್ಯನ ದಿನವೂ ಕಳೆದುಹೋಗುವುದು. ಆವನುಪ್ರೇಮಿಕನೋ, ಆವನು ಭೋಗಸುಖದಲ್ಲಿಯೇ ಕಾಲವನ್ನು ಕಳೆವೆನೆಂದು ಸಂಕಲ್ಪ ಮಾಡಿ ತನ್ನ ಪಿತೃಪೈತಾಮಹ ಸಂಪತ್ತಿಯನ್ನು ದುರುಪಯೋಗ ಪಡಿಸುವನೋ, ಆವನು, ಅನ್ನಕ್ಕೋಸ್ಕರ ಪಡಬಾರದ ಕಷ್ಟವನ್ನು ಪಟ್ಟು, ಬರೀ ಕೈಯಲ್ಲಿ ಮನೆಗೆ ಬಂದು, "ಪುತ್ರಕಲತ್ರಾದಿಗಳಿಗೆ ಒಂದು ತುತ್ತು ಅನ್ನವನ್ನು ಕೂಡ ಹಾಕಲಾರದವನಾದೆನಲ್ಲಾ!" ಎಂದು ಮರ್ಮಾಹತನಾಗಿ, ತನ್ನ ಜೀವನವನ್ನು ಸುಡು, ಅದೃಷ್ಟವನ್ನು ಸುಡು, ತನ್ನ ವಿದ್ಯಾಬುದ್ಧಿಗಳನ್ನು ಸುಡು, ಎಂದು ಧಿಕ್ಕಾರ ಮಾಡುತ್ತಾ ತಲೆಯ ಮೇಲೆ ಕೈಯಿಟ್ಟುಕೊಂಡು ಏನೂ ತೋರದೇ ವ್ಯಸನಪಡುತಲಿರುವನೋ, ಅವನ ದಿವಸಗಳೂ ಕಳೆದೇ ಹೋಗುವುವು. ಆವ ಗಂಡ ಹೆಂಡಿರು ಪರಸ್ಪರಾನುರಾಗ ದಿಂದ ಭೇದಾಭೇದವನ್ನರಿಯದೇ ಇಹಸಂಸಾರದಲ್ಲಿ ಸರ್ವಸುಖವನ್ನೂ ಅನುಭವಿಸುತ್ತಾ ಯುಗವನ್ನಾದರೂ ಕ್ಷಣಕಾಲದಂತೆ ಕಳೆಯುತ್ತಿರುವರೋ, ಅಂತಹವರ ದಿನವೂ ಕಳೆದುಹೋಗುವುದು. ದಿನವು ಕಳೆದುಹೋಗುವುದು ; ನಿಲ್ಲುವುದಿಲ್ಲ. ಅದು ಯಾರನ್ನೂ ನೋಡುವುದಿಲ್ಲ. ದುಃಖದಲ್ಲಿಯಾಗಲಿ, ಸುಖದಲ್ಲಿಯಾಗಲಿ, ಸಮಸ್ತರ ದಿನವೂ ಕಳೆದೇ ಹೋಗುವುದು.

ನರೇಂದ್ರನಾಥನ ದಿನವೂ ಹಾಗೆಯೇ ಕಳೆದುಹೋಗುತಿದ್ದಿತು. ಆದರೆ ಶೋಭನೆಯ ಚಿಂತೆಯು ಮಾತ್ರ ಅವನ ಹೃದಯದಿಂದ ದೂರವಾಗಿ ಹೋಗುತ್ತಿರಲಿಲ್ಲ. ದಿನೇ ದಿನೇ ಆ ಚಿಂತೆಯು ಹೃದಯದಲ್ಲಿ ಬಲವಾಗಿ ಬದ್ಧಮೂಲವಾಗುತ್ತಿದ್ದಿತು. ನರೇಂದ್ರನ ಥಳಥಳಿಪ ಯೌವನ ಸುಲಭವಾದ ಸುಂದರವಾದ ಆ ಮುಖಕಾಂತಿಯೂ ಇಲ್ಲ. ಮುಖದಲ್ಲಿ ಸುವರ್ಣ ಚ್ಛಾಯೆಯು ಹೋಗಿ ವಿವರ್ಣವೇರ್ಪಟ್ಟಿತ್ತು. ಅವನ ಸದಾ ಪ್ರಫುಲ್ಲವಾದ ಮುಖದಲ್ಲಿ ಭುವನಮೋಹಕವಾದ ನಗೆಯೂ ಇಲ್ಲ, ವಿದ್ಯಾರ್ಜನೆಯಲ್ಲಿ ಅವನಿಗೆ ಅಭಿರುಚಿಯೂ ಇಲ್ಲ; ಆಹಾರದಲ್ಲಿಯೂ, ವಿಹಾರದಲ್ಲಿಯೂ, ಶಯನದಲ್ಲಿಯೂ, ಸ್ವಪ್ನ

ದಲ್ಲಿಯೂ, ಎಲ್ಲೆಲ್ಲಿಯೂ ಅವನಿಗೆ ಶೋಭನೆಯ ರೂಪವು ತಾನೇ ತಾನಾಗಿ ಉಜ್ಜ್ವಲಿತವಾಗುತ್ತಿದ್ದಿತು. ನರೇಂದ್ರನಿಗೆ ಹಿಂದೂ ಶೋಭನೆ, ಮುಂದೂ ಶೋಭನೆ, ಉಭಯಪಾರ್ಶ್ವಗಳಲ್ಲಿಯೂ ಶೋಭನೆಯಾಗಿತ್ತು. ರಮೇಶನ ಮನೆಗೆ ಹೋಗಬೇಕೆಂದು ಮನಸ್ಸಾಗುವುದು, ಆದರೆ ಲಜ್ಜೆಯು ಬಾಧಿಸುವುದು. ಕಾಗದ ಬರೆಯುವುದಕ್ಕೆ ಮನಸ್ಸು ಬಂದರೂ ಕೈಸಡಿಲಗುವುದು. ಆಟಪಾಟಗಳಲ್ಲಿಯೂ, ಊಟನೋಟಗಳಲ್ಲಿಯೂ, ನರೇಂದ್ರನಿಗೆ ಇಚ್ಛೆಯು ತಪ್ಪಿ, ಅವನು ದಿನೇದಿನೇ ಕೃಶನಾಗುತ ಬಂದನು. ನರೇಂದ್ರನ ತಾಯಿತಂದೆಗಳು, ಇದಕ್ಕೆ ಕಾರಣವನ್ನು ಕೊಂಚವೂ ಅರಿಯಲಾರದವರಾಗಿದ್ದರು. ನರೇಂದ್ರನು ತನ್ನ ಕೊಠಡಿಯಲ್ಲಿ ಯಾವಾಗಲೂ ಕುಳಿತು ಪುಸ್ತಕಗಳನ್ನು ಮುಂದಿಟ್ಟುಕೊಂಡಿರುವನು ; ಅವನು ಓದುತ್ತಿದ್ದನೋ ಇಲ್ಲವೋ ಅದು ಮಾತ್ರ ಸಂದೇಹ. ತಾಯಿತಂದೆಗಳು ಈಚೀಚೆಗೆ ಮಗನು ವಿಶೇಷವಾಗಿ ವಿದ್ಯಾಪರಿಶ್ರಮವನ್ನು ಮಾಡುತ್ತಿರುವನೆಂದು ಮಾತ್ರ ತಿಳಿದುಕೊಂಡಿದ್ದರು. ಆದರೆ ಅವನ ಹೃದಯಸಾಗರದಲ್ಲಿ, ಪರ್ವತಾಕಾರವಾದ ಗೊತ್ತುಗುರಿಯಿಲ್ಲದ ಶೋಕತರಂಗಗಳೆದ್ದು ಎಲ್ಲೆಯನ್ನು ಮೀರಿಹೋಗುತ್ತಿದ್ದುವೆಂಬುದನ್ನು ಯಾರು ತಾನೇ ತಿಳಿಯಬಲ್ಲರು ? ನರೇಂದ್ರನು ಸ್ವಲ್ಪ ಹೊತ್ತು ಆವುದೋ ಒಂದು ಪುಸ್ತಕವನ್ನು ಓದಿದನು. ಅದು ಆವ ಪುಸ್ತಕವೋ ಅವನು ಅದೇನ ಓದಿದನೋ ಆವುದೂ ಅವನಿಗೆ ತಿಳಿಯಲೇ ಯಿಲ್ಲ. ಅವನಿಗೆ ಪುಸ್ತಕ ಓದಿ ಬೇಸರವಾಯಿತು. ಅದನ್ನು ದೂರ ಬಿಸುಟು ಸ್ವಲ್ಪ ಹೊತ್ತು ಕುಳಿತುಕೊಂಡಿರುವನು, ಇಲ್ಲವೇ ನಿಂತುಕೊಂಡಿರುವನು ; ಅದೂ ಸರಿಬೀಳದೇ ಹೋದರೆ ಶತಪಥ ತಿರುಗುತಲಿರುವನು. ಅವನು ನಂದನಪುರದಿಂದ ಬಂದಾಗಿನಿಂದಲೂ ಪ್ರತಿದಿನವೂ ಅತಿಪ್ರಯಾಸದಿಂದ ಹೀಗೆಯೇ ಕಾಲಕಳೆಯುತ್ತಿರುವುದು. ಅವನ ಹೃದಯದಲ್ಲಿ ದಾರುಣವಾದ ವೇದನೆ. ಶೋಭನೆಯೇ ಆ ಚಿಂತೆಗೆ ಮುಖ್ಯ ವಿಷಯಳು. ಮಧ್ಯೇಮಧ್ಯೇ "ತಂದೆಯು ಒಬ್ಬ ಹಣಗಾರನಾಗಿದ್ದಿದ್ದರೆ ಶೋಭನೆಯನ್ನು ನಾನು ಹೊಂದುವ ಆಸೆಯಿತ್ತು. ರಮೇಶಬಾಬು ಕಂಡುಕಂಡು ದರಿದ್ರನಿಗೆ ಹೇಗೆತಾನೆ ತನ್ನ ಏಕಮಾತ್ರ ಕನ್ನೆಯನ್ನು ಕೊಟ್ಟಾನು ? ನಮ್ಮ ದಾರಿದ್ರ್ಯ ದುಃಖವನ್ನು ದೂರಮಾಡುವುದಕ್ಕೆ ಉಪಾಯವೇ ಕಂಡುಬರುವುದಿಲ್ಲ. ನಾನು ದ್ರವ್ಯವನ್ನು ಸಂಪಾದನೆ ಮಾಡಿ ನನ್ನ ದುರವಸ್ಥೆಯನ್ನು ಹೋಗಲಾಡಿಸಿಕೊಳ್ಳುವ ವರೆಗೂ, ಶೋಭನೆಯು ಕಾದಿರುವಳೋ ? ಅವಳಿಗೆ ಬೇರೆ ಕಡೆ ಮದುವೆಯು ಆಗಿಯೇ ಹೋಗುವುದು. ಶೋಭನೆಯನ್ನು ಹೊಂದದ ಮೇಲೆ ದ್ರವ್ಯಸಂಪಾದನೆ ಮಾಡಿ ಆಗುವುದೇನು ? ಅಥವಾ ಬದುಕಿ ತಾನೇ ಫಲವೇನು ?" ಎಂದು ಮಾತನಾಡಿಕೊಳ್ಳುವನು. ಇನ್ನೂ ಏನೇನೋ ಜ್ಞಾಪಕಕ್ಕೆ ಬರುವದು. ಅವನಿಗೆ ಉಪಾಯ ತೋರದೇ ಜಗತ್ತೆಲ್ಲವೂ ಶೂನ್ಯವಾಗಿ ಕಂಡುಬರುವುದಕ್ಕೆ ಪ್ರಾರಂಭವಾಯಿತು.

ಆ ಸಮಯದಲ್ಲಿ ತನ್ನ ಕೊಠಡಿಯ ಬಾಗಿಲ ಮುಂದೆ ಯಾರೋ ಬಂದಹಾಗಾಯಿತು. ನೋಡಲಾಗಿ ರಮೇಶಬಾಬುವೇ ಬಂದು ನಿಂತಿದ್ದನು. ರಮೇಶನನ್ನು ನೋಡಿದೊಡನೆಯೇ ನರೇಂದ್ರನ ಹೃದಯದಲ್ಲಿ ಭಯವು ಪದಾರ್ಪಣಮಾಡಿತು.

ರಮೇಶನು ಕೊಠಡಿಯೊಳಗೆ ಪ್ರವೇಶಮಾಡಿದನು. ನರೇಂದ್ರನು ಅವನಿಗೆ ಪ್ರಣಾಮ ಮಾಡಿ ಒಂದು ಉಚಿತವಾದ ಆಸನದಲ್ಲಿ ಕುಳ್ಳಿರಿಸಿದನು. ರಮೇಶನು ಆಸನಗ್ರಹಣ ಮಾಡಿದ ಮೇಲೆ, "ನಿನ್ನ ತಂದೆಯು ಮನೆಯಲ್ಲಿರುವನೆ?" ಎಂದು ಕೇಳಿದನು.

ನರೇಂದ್ರನ ತಂದೆಯು ಮನೆಯೊಳಗೆ ಏನೋ ಕೆಲಸದಲ್ಲಿದ್ದನು. ರಮೇಶನು ಕೇಳಿದೊಡನೆಯೇ, ನರೇಂದ್ರನು ಒಳಗೆ ಹೋಗಿ, ರಮೇಶಬಾಬುವು ಬಂದಿರುವುದನ್ನು ತಂದೆಗೆ ತಿಳಿಸಿದನು. ನರೇಂದ್ರನ ತಂದೆಯು ತಡಮಾಡದೇ ರಮೇಶನನ್ನು ನೋಡಲು ಬಂದನು. ಇಬ್ಬರಿಗೂ ಪರಸ್ಪರ ಯೋಗಕ್ಷೇಮದ ವಾರ್ತೆಯು ನಡೆಯಿತು. ಇದಾದ ಮೇಲೆ ರಮೇಶನು ಬಂದ ಕಾರ್ಯವನ್ನು ಕುರಿತು ನರೇಂದ್ರನ ತಂದೆಗೆ ತಿಳಿಯ ಹೇಳಿದನು. ನರೇಂದ್ರನಾಥನ ತಂದೆಯ ಹೆಸರು, ನಗೇಂದ್ರನಾಥನೆಂಬುದನ್ನು ನಮ್ಮ ವಾಚಕ ಮಹಾಶಯರು ಇನ್ನೂ ಜ್ಞಾಪಕದಲ್ಲಿಟ್ಟಿರಬಹುದು. ನಗೇಂದ್ರನಾಥನು ರಮೇಶನ ಮಾತಿಗೆ ಉತ್ತರವಾಗಿ "ತಾವು ದೊಡ್ಡ ಮನಸ್ಸು ಮಾಡಿದುದು ನಮಗೆ ಪರಮ ಸೌಭಾಗ್ಯವು. ತಮ್ಮ ಇಷ್ಟವು ಹೇಗಿರುವುದೋ ಹಾಗೆಯೇ ಕೆಲಸವು ನಡೆವುದು" ಎಂದು ಹೇಳಿದನು.

ನರೇಂದ್ರನು, ಇವರ ಪರಸ್ಪರ ಸಂಭಾಷಣೆಯನ್ನು ಕೇಳಿ, ಅಲ್ಲಿ ನಿಲ್ಲಲಾರದೆ ಹೊರಗೆ ಹೋದನು. ಆಗಣ ಕಾಲದಲ್ಲಿದ್ದ ನರೇಂದ್ರನ ಹೃದಯ ಭಾವವನ್ನು ನಮ್ಮ ಕ್ಷುದ್ರವಾದ ಲೇಖನಿಯಿಂದ ವರ್ಣನೆ ಮಾಡಲು ಅಸಾಧ್ಯವು. ಒಬ್ಬೊಬ್ಬರಿಗೆ ಕೊಂಚ ಹೊತ್ತು ಮಾತುಕಥೆಗಳು ನಡೆದು, ಕೊನೆಗೆ ಶೋಭನೆಯನ್ನು ನರೇಂದ್ರನಿಗೆ ಕೊಟ್ಟು ವಿವಾಹವು ನಡೆಯಬೇಕೆಂದು ಸ್ಥಿರವಾಯಿತು. ಆಮೇಲೆ ರಮೇಶನು ನರೇಂದ್ರನನ್ನು ಕರೆದು, ಪದ್ಧತಿಯ ಮೇರೆ ಆಶೀರ್ವಾದಮಾಡಿದನು. ರಮೇಶನು ನಗೇಂದ್ರನಿಗೆ "ಹುಡುಗಿಯನ್ನು ನೋಡಿಕೊಂಡು ಹೋಗಬಹುದು" ಎಂದನು.

ನಗೇಂದ್ರ—ನಾನು ನೋಡಬೇಕಾದ ಆವಶ್ಯಕವಿಲ್ಲ. ನರೇಂದ್ರನು ಶೋಭನೆಯನ್ನು ಚೆನ್ನಾಗಿ ಪ್ರೀತಿಸುವನೆಂದು ನಾನು ಕೇಳಿರುವೆನು; ಈಗಿನ ಕಾಲದಲ್ಲಿ ಮುಖ್ಯವಾಗಿ ಹುಡುಗರು ಒಪ್ಪಿದರೆ ಸಾಕು. ತಾವು ದೊಡ್ಡ ಮನಸ್ಸು ಮಾಡಿ ನಮ್ಮ ದಾರಿದ್ರ್ಯವನ್ನು ಕೂಡ ಗಮನಿಸದೇ ಕನ್ನೆಯನ್ನು ಕೊಡುವು

ದಾಗಿ ಹೇಳಿದುದೊಂದೇ ನಮಗೆ ಮಹೋಪಕಾರ ಮಾಡಿದಂತಾಯಿತು. ತಮ್ಮ ಉದಾರತೆಯು ಚಿರಸ್ಮರಣೀಯವಾಗಿರುವುದು.

ಹೀಗೆ ಹೇಳಿ ನಗೇಂದ್ರನು, ರಮೇಶಬಾಬುವಿಗೆ ಕಾಲೋಚಿತವಾದ ಸಮ್ಮಾನವನ್ನು ಮಾಡಿದನು. ಇದನ್ನು ನೋಡಿ, ರಮೇಶನಿಗೆ ಬಲು ಸಂತೋಷ ವಾಯಿತು. ಸ್ವಲ್ಪ ಹೊತ್ತಿನ ಮೇಲೆ, ರಮೇಶನು ನಗೇಂದ್ರನಿಂದ ಅನುಮತಿ ಯನ್ನು ತೆಗೆದುಕೊಂಡು ಮನೆಗೆ ಹೊರಟುಹೋದನು.

ನರೇಂದ್ರನಾಥನು, ಒಳಗೇ ಇದ್ದುಕೊಂಡು, ರಮೇಶನಿಗೂ ತನ್ನ ತಂದೆಗೂ ನಡೆದ ಮಾತುಕತೆಗಳನ್ನೆಲ್ಲವನ್ನೂ ಕೇಳಿದನು. ಅವನ ಮೈ ಆದ್ಯಂತವೂ ಸಂತೋಷದಿಂದ ರೋಮಾಂಚಿತವಾಯಿತು. ಯಾವ ನರೇಂದ್ರನಿಗೆ ಎರಡು ಮೂರು ಗಂಟೆಯ ಕಾಲಕ್ಕೆ ಮುಂಚೆ ಜೀವನವು ಸಹಿಸಲಸಾಧ್ಯವಾದ ನರಕಯಾತ ನೆಗೆ ತೌರುಮನೆಯಾಗಿದ್ದಿತೋ, ಸಂಸಾರವು ನಿಸ್ಸಾರವಾಗಿ ಕಾಡುಗಿಚ್ಚಿನಂತೆ ಜ್ವಾಲಾಮಯವಾಗಿ ಕಂಡುಬರುತ್ತಿದ್ದಿತೋ, ಹೃದಯದ ಆಶೆಯು ಗತಿಯನ್ನು ಕಾಣದೆ ನಾನಾ ಪ್ರಕಾರ ಭಿನ್ನ ಭಿನ್ನವಾಗಿ ಹೋಗಿದ್ದಿತೋ, ಅಂತಹ ನರೇಂದ್ರ ನನ್ನು, ಪಾಠಕ ಮಹಾಶಯರೇ! ಈ ಕ್ಷಣದಲ್ಲಿ ಒಂದಾವೃತ್ತಿ ನಿಮ್ಮ ಕಡೆಗಣ್ಣು ನೋಟದಿಂದ ನೋಡಿಬಿಡಿರಿ. ಸ್ವಲ್ಪ ಹೊತ್ತಿಗೆ ಮುಂಚೆ ಅವನ ಮುಖವು ಕಂ ಗೆಟ್ಟು ಒಣಗಿಹೋಗಿದ್ದುದು ಈಗ ಎಷ್ಟು ಪ್ರಫುಲ್ಲವಾಗಿದೆ. ಅವನಲ್ಲಿ ಉತ್ಸಾಹ ರಸವೆಂಬುದು ಮೂರ್ತಿಮತ್ತಾಗಿ ಬಂದು ಅವನನ್ನು ಎಡೆಬಿಡದೇ ಸೇವಿಸುತ್ತ ಲಿರುವುದು.

ರಮೇಶನು ಹೊರಟುಹೋದ ಮೇಲೆ ನರೇಂದ್ರನು ತನ್ನ ಕೊಠಡಿಯೊಳಗೆ ಬಂದು ಕುಳಿತನು. ಅವನ ಹೃದಯದಲ್ಲಿ ಪೂರ್ವಘಟನಾವಳಿಗಳು ಒಂದೊಂದಾಗಿ ತಲೆದೋರಲಾರಂಭಿಸಿದುವು. ಒಂದೊಂದು ವೇಳೆ ಶೋಭನೆಯು ತನ್ನ ಪಕ್ಕದಲ್ಲಿ ಕುಳಿತಂತೆಯೂ, ಒಂದೊಂದು ವೇಳೆ ಶೋಭನೆಯು ತನ್ನ ಮುಖಮಂಡಲವನ್ನು ಹಿಡಿದುಕೊಂಡು ಪ್ರೀತಿಯೊಡನೆ "ನರೇಂದ್ರ! ಇದೇಕೆ ಇಷ್ಟು ಕಾತರನಾ ಗಿರುವೆ?" ಎಂದು ಕೇಳುವಂತೆಯೂ, ಒಂದೊಂದು ವೇಳೆ ಶೋಭನೆಯು ತನ್ನನ್ನು ಕುರಿತು, "ಪ್ರಿಯನೆ! ದರಿದ್ರನಿಗೆ ಶೋಭನೆಯು ದೊರಕುವುದೆಂದರೇನು? ಎಂದು ಹತಾಶನಾಗಿದ್ದೆಯಲ್ಲ, ಈಗ ನೋಡು ಯಾರ ಶಕ್ತಿಯು ಫಲಿಸಿತು? ನಮ್ಮಿಬ್ಬರ ಪರಸ್ಪರಾನುರಾಗಕ್ಕೆ ದಾರಿದ್ರ್ಯ ಕಾರಣವಲ್ಲ; ಐಶ್ವರ್ಯ ಕಾರಣವಲ್ಲ" ಎಂದು ಹೇಳುತ್ತಿದ್ದಂತೆಯೂ, ಒಂದೊಂದುವೇಳೆ ಶೋಭನೆಯು "ಪಾದಸೇವಕ ಳಾದ ನನ್ನನ್ನು ಸರ್ವಾಪರಾಧದಿಂದ ಕಾಪಿಡಬೇಕು. ನಾನು ನಿನ್ನ ಮನಸ್ಸಿಗೆ

ಬಹಳ ವ್ಯಥೆಯನ್ನುಂಟುಮಾಡಿದೆನು. ನೀನು ಅದಾವುದನ್ನೂ ಮನಸ್ಸಿಗೆ ತಂದು ಕೊಳ್ಳಕೂಡದು " ಎಂದು ಹೇಳುತ್ತಿದ್ದಂತೆಯೂ, ನರೇಂದ್ರನ ಹೃದಯದಲ್ಲಿ ವಿಧ ವಿಧವಾಗಿ ಭಾವಗಳು ಅಂಕುರಿತವಾದುವು.

ಬಹು ಮಾತಿನಿಂದೇನು? ನರೇಂದ್ರನ ಹೃದಯವು ಸಂತೋಷದಿಂದ ತುಂಬಿ ತುಳುಕಾಡುತಲಿದ್ದಿತು. ನರೇಂದ್ರನ ಹತ್ತಿರ ಶೋಭನೆಯ ಭಾವಚಿತ್ರ ವೊಂದು ಇದ್ದಿತು. ಅದನ್ನು ಶೋಭನೆಯು ಅವನಿಗೆ ಮೊದಲೇ ಕೊಟ್ಟಿದ್ದಳು. ಈಗ ಅದು ಜ್ಞಾಪಕಕ್ಕೆ ಬಂದು ಅದನ್ನು ಕೈಯಲ್ಲಿ ತೆಗೆದುಕೊಂಡನು. ಅದನ್ನು ಕೈಯಲ್ಲಿಟ್ಟುಕೊಂಡು ನಾಲ್ಕು ದಿಕ್ಕುಗಳನ್ನೂ ನೋಡಿದನು. ಸಮಿಾಪದಲ್ಲಿ ಯಾರೂ ಇಲ್ಲದಿರುವದನ್ನು ಕಂಡು ತನ್ನ ದೃಷ್ಟಿಯನ್ನು ಆ ಚಿತ್ರದ ಮೇಲೆ ಇಟ್ಟನು, ಬಹಳ ಹೊತ್ತು ಅದನ್ನೇ ನೋಡಿದನು. ನಿಜವಾಗಿಯೂ ಶೋಭನೆಯೇ ಅವನ ಇದಿರಿನಲ್ಲಿ ಬಂದು ನಿಂತಿದ್ದಂತೆ ಬೋಧೆಯಾಯಿತು. ಚಿತ್ರಗತಳಾದ ಶೋಭ ನೆಯನ್ನು ನೋಡಿ,—ಶೋಭನೆ! ಇಷ್ಟು ದಿವಸ ಎಲ್ಲಿಗೆ ಹೋಗಿದ್ದೆ? ನಿನ್ನನ್ನು ಕಾಣದೆ ನಾನು ಪಡಬಾರದ ಕಷ್ಟಗಳೆಲ್ಲವನ್ನೂ ಅನುಭವಿಸಿದೆನು. ಇದಾವುದೂ ನಿನಗೆ ಗೊತ್ತಾಗದೇ ಹೋಯಿತೆ? ಹೃದಯೇಶ್ವರಿ! ನನ್ನ ಸರ್ವಸ್ವವನ್ನು ನಿನಗೆ ಅರ್ಪಿಸಿರುವಾಗ, ನೀನು ಕಿಂಚಿತ್ತಾದರೂ ನನ್ನಲ್ಲಿ ದಯೆಯನ್ನು ತೋರಿಸದಿರ ಬಹುದೆ? ನಾನು ನಿನ್ನನ್ನು ಪ್ರೀತಿಸಿದುದೇ ಒಂದು ದೊಡ್ಡ ತಪ್ಪಾಯಿತೆ? ನೀನು ನನಗೆ ಬಹುವಿಧವಾಗಿ ಭರವಸೆಯನ್ನು ಕೊಡಲಿಲ್ಲವೆ? ಈಗ ಅದೆಲ್ಲಿ ಹೋಯಿತು? ಬೇಡ, ನನ್ನನ್ನು ವೃಥಾ ಸಂಕಟಕ್ಕೆ ಗುರಿಮಾಡಬೇಡ. ನಾನು ನಿನಗೋಸ್ಕರ ವಾಗಿ ಬಲು ನೊಂದಿರುವೆನು. ಇನ್ನೂ ನೀನು ಹುಡುಗಾಟವನ್ನು ಆಡುವುದಾದರೆ ನನ್ನ ಪ್ರಾಣವು ಕ್ಷಣಕಾಲವೂ ನಿಲ್ಲಲಾರದು! ಎಂದು ಹೇಳಿ ಆ ಚಿತ್ರವನ್ನು ಆಲಿಂಗಿಸುವುದಕ್ಕೆ ಯತ್ನಮಾಡಿದನು. ಅಷ್ಟಕ್ಕೆ ಅವನಿಗೆ ತೃಪ್ತಿ ಕಂಡುಬರಲಿಲ್ಲ. ಮತ್ತೆ ಮತ್ತೆ ನೋಡುವನು. ಆದರೂ ದುರಂತವಾದ ಆಶೆಯು ಅವನ ಮನ ಸ್ಸನ್ನು ಸ್ಥಿರವಾಗಿ ನಿಲ್ಲಿಸಲಾರದೇ ಹೋಯಿತು.

ಆಶೆಯ ಶಕ್ತಿಯು ಎಂತಹುದು? ಆಶೆ! ನಿನ್ನ ಧೈರ್ಯವು ಧನ್ಯವಾದುದು. ನಿನ್ನ ಶಕ್ತಿಯಿಂದಲೇ ಜಗತ್ತೆಲ್ಲವನ್ನೂ ಪರಸ್ಪರ ಬದ್ಧವನ್ನಾಗಿ ಮಾಡಿರುವೆ. ಮಾನವ ಹೃದಯದಲ್ಲಿ ನೀನು ಆಧಿಪತ್ಯಮಾಡದಿದ್ದರೆ, ಜಗತ್ತು ಜಡಸ್ವರೂಪ ವಾಗಿ ಇದ್ದಲ್ಲಿಯೇ ಬಿದ್ದಿರುತ್ತಿತ್ತು. ನಿನ್ನ ಪ್ರಭಾವದಿಂದಲೇ ಮೃತ್ಯುವಿನ ಮುಖದಲ್ಲಿ ಬಿದ್ದವನೂ ಬದುಕಬೇಕೆನ್ನುವನು. ಅಧಾರ್ಮಿಕನು ಯೋಗಿಯಾಗು ವನು. ಯೋಗಿಯು ಅಧಾರ್ಮಿಕನಾಗುವನು. ನಿನ್ನ ಪ್ರಭಾವದಿಂದಲೇ ದರಿ ದ್ರನೂ ಭೂಮಿಗೆಲ್ಲಾ ಅಧಿಪತಿಯಾಗಲೆಣಿಸುವನು. ನರೇಂದ್ರನಲ್ಲಿ ನೀನು ತಲೆ

ದೋರಿರುವೆ. ನಿನ್ನ ಆ ಮೋಹನ ಶಕ್ತಿಯಿಂದಲೇ ಅವನು ಜೀವಧಾರಣೆ ಮಾಡಿದ್ದುದು, ಮುಂದಕ್ಕೂ ಮಾಡುವುದು. ನೀನು ಮಾತ್ರ ಎಲ್ಲರಲ್ಲಿಯೂ ನಿರ್ಘೃಣನಂತೆ ಪ್ರವರ್ತಿಸಬೇಡ. ಜನಗಳ ಇಷ್ಟಾರ್ಥಗಳನ್ನು ಪೂರ್ಣಮಾಡು ವುದರಿಂದ, ಅವರ ಸ್ತೋತ್ರಕ್ಕೆ ಪಾತ್ರವಾಗಿ ನಿನ್ನಗೊಡ್ಡು ಜನ್ಮವನ್ನು ಸಾರ್ಥಕ ಮಾಡಿಕೊಳ್ಳು.

ನರೇಂದ್ರನು ಆಶಾಪರವಶನಾಗಿ ರಪ್ಪೆಹಾಕದೇ ಆ ಚಿತ್ರವನ್ನೇ ನೋಡುತ್ತ ಕುಳಿತುಬಿಟ್ಟನು. ಅವನಿಗೆ ಎಲ್ಲವೂ ಮರೆತುಹೋಯಿತು. ತಾನು ಆರೆಂಬುದು ಕೂಡ ತಿಳಿಯಲಾರದವನಾಗಿ, ತದೇಕಚಿತ್ತತೆಯಿಂದ ಆ ಪಟವನ್ನೇ ನೋಡುತ್ತ ಕಾಲವನ್ನು ಕಳೆಯುತ್ತಿದ್ದನು. ಅಷ್ಟುಹೊತ್ತಿಗೆ ಸರಿಯಾಗಿ ಅವನ ತಂದೆಯು ಅಲ್ಲಿಗೆ ಬಂದನು. ನರೇಂದ್ರನು ಚಕಿತನಾಗಿ ಎದ್ದು ನಿಂತನು. ಚಿತ್ರಪಟವು ಕೈಯಿಂದ ಜಾರಿ ಭೂಮಿಯಲ್ಲಿ ಬಿದ್ದಿತು. ನಗೇಂದ್ರನಾಥನು, ಒಂದಾವೃತ್ತಿ ತನ್ನ ದೃಷ್ಟಿಯನ್ನು ಆ ಚಿತ್ರದ ಮೇಲೆ ಪ್ರಸಾರಣೆಮಾಡಿ, ಅಲ್ಲಿಂದ ಕೂಡಲೆ ಹೊರಟು ಹೋದನು. ಹೋದವನು ನರೇಂದ್ರನನ್ನು ಕೂಗಿದನು. ನರೇಂದ್ರನು ಚಿತ್ರ ವನ್ನು ಭದ್ರವಾಗಿ ತೆಗೆದಿಟ್ಟು ಅವನ ತಂದೆಯು ಇದ್ದಲ್ಲಿಗೆ ಹೊರಟು ಹೋದನು.

---

## ಹದಿನೆಂಟನೆಯ ಪರಿಚ್ಛೇದ

ರಮೇಶಬಾಬುವು, ನಗೇಂದ್ರನಾಥನಿಂದ ಅಪ್ಪಣೆ ತೆಗೆದುಕೊಂಡು ಮನೆಗೆ ಬಂದನು. ದಾರಿಯಲ್ಲಿ ಅವನಿಗೆ ತುಂಬಾ ಕಷ್ಟವಾಯಿತು. ವಿಶಾಲಾಕ್ಷಿಯು, ಹುಬ್ಬುಗಂಟುಹಾಕಿಕೊಂಡು ವಿಕಟವಾದ ಮೂರ್ತಿಯನ್ನು ಧಾರಣಮಾಡಿದ್ದಳು. ಇದನ್ನು ನೋಡಿ ರಮೇಶನ ಮನಸ್ಸಿನಲ್ಲಿ ಭಯ ಸಂಚಾರವುಂಟಾಯಿತು. ವಿಶಾ ಲಾಕ್ಷಿಯ ವಕ್ಷದಲ್ಲಿ ತರಂಗಗಳು ಒಂದಾಗುತಲೆ ಮತ್ತೊಂದು ಬರುತಿರುವುದನ್ನು ನೋಡಿದವರೆಲ್ಲರೂ ಭಯದಿಂದ ಗಡಗಡನೆ ನಡುಗುವರು. ಕೋಪದಿಂದಲೋ ಎಂಬಂತೆ ತರಂಗಗಳು ತಟಗಳನ್ನು ಆಘಾತಮಾಡುತಲಿದ್ದುವು. ವಿಶಾಲಾಕ್ಷಿಯ ತಟಗಳು ಉಚ್ಚವಾಗಿದ್ದುವು. ದೊಡ್ಡವರು ನೀಚರ ಆಡಂಬರವನ್ನು ಗಣನೆಗೆ ತರದೇ ಇರುವಂತೆ, ಇವುಗಳು ಕ್ಷುದ್ರಜೀವಿಗಳಾದ ತರಂಗಗಳ ಆಘಾತವನ್ನು ಲೆಕ್ಕಿಸದೇ ಹೋದುವು. ಆದರೆ ತೀರದಲ್ಲಿದ್ದ ಮೃತ್ತಿಕೆಯಾದರೋ ಮಹಾ ಚಪಲೆಯಾದ ಕಾಮುಕಿಯು. ತರಂಗಗಳು ಬಂದು ಚುಂಬನ ಮಾಡಿದೊಡನೆಯೇ ಮನಗರಗಿದಳು. ಕರಗಿ ನೀರಾಗಿ ಹರಿದಳು, ಕೊನೆಗೆ ಹೇಳದೇ ಕೇಳದೇ ತರಂಗ ಗಳಲ್ಲಿ ಸೇರಿಕೊಂಡು ಎಲ್ಲಿಯೋ ವಿಹರಿಸಲು ಹೊರಟು ಹೋದಳು. ಸ್ತ್ರೀಯೇ ಆಗಲಿ

ಪುರುಷನೇ ಆಗಲಿ, ಜಿತವಾದ ಮನಸ್ಸು ಇಲ್ಲದ ಮೇಲೆ ಎಲ್ಲರ ಪಾಡೂ ಹೀಗೆಯೇ ಸರಿ. ಹೊತ್ತು ಗೊತ್ತಿಲ್ಲದೇ ವಿಶಾಲಾಕ್ಷಿಯ ವಕ್ಷಸ್ಸಿನ ಮೇಲೆ ಇಂತಹ ಅತ್ಯಾಚಾರವು ನಡೆಯುತ್ತಿರುವುದನ್ನು ನೋಡಿ ರಮೇಶನು ಭಯದಿಂದ ನಡುಗಲಾರಂಭಿಸಿದನು.

ಅತಿ ಪ್ರಯಾಸದಿಂದ ನದಿಯನ್ನು ದಾಟಿ ರಮೇಶನು ಮನೆಗೆ ಬಂದು ಸೇರಿದನು. ಹೆಂಡಿತಿಯಾದ ಸಾವಿತ್ರಿಗೆ ನಡೆದ ಸಮಾಚಾರವನ್ನೆಲ್ಲಾ ತಿಳಿಸಿದನು. ರಮೇಶನ ತಾಯಿಯೂ ಇದೆಲ್ಲವನ್ನೂ ಕೇಳಿದಳು. ಇಬ್ಬರಿಗೂ ಪರಮಸಂತೋಷವಾಯಿತು. ಈ ಪರಸ್ಪರ ಸಂಭಾಷಣೆಯನ್ನು ಮತ್ತೊಬ್ಬಳು ಕೇಳುತಿದ್ದಳು. ಎಲ್ಲರಿಗಿಂತಲೂ ಅವಳ ಹೃದಯವು ಆನಂದಸಾಗರವಲ್ಲಿ ತೇಲಿ ಮುಳುಗತಲಿತ್ತು. ಇವಳೇ ಶೋಭನೆಯೆಂಬುದು ನಮ್ಮ ವಾಚಕರಿಗೆ ಹೇಳಬೇಕಾದುದಿಲ್ಲ. ಶೋಭನೆ! ಈ ಮಾತನ್ನು ಕೇಳಿದೊಡನೆಯೇ ಕುಸುಮಿತವಾದ ಲತೆಯಂತೆ ನಿನ್ನ ಮುಖಕಮಲವು ಅರಳಿದುದೇತಕೆ? ನಿನ್ನ ಅಧರೋಷ್ಠವೆಂಬ ರಂಗಸ್ಥಳದಲ್ಲಿ ಮುಗುಳು ನಗೆಯು, ನೋಟಕರ ಮನಸ್ಸನ್ನು ಎಳೆವಂತೆ, ನರ್ತನ ಮಾಡುತಿರುವುದೇತಕೆ? ನಿನ್ನ ಅಂಗಾಂಗಗಳಲ್ಲಿ ಇಷ್ಟು ಚಾಕಚಕ್ಯವು ಎಲ್ಲಿಂದ ಬಂತು? ಇದೇನು ಕ್ಷಣಕ್ಕೊಂದಾವೃತ್ತಿ ನಿನ್ನ ಮೈಯ್ಯಲ್ಲವೂ ರೋಮಾಂಚಿತವಾಗಿ ಕಂಪಿತವಾಗುತಲಿರುವುದು? ಶೋಭನೆ! ನೀನು ಆವನಿಗೆ ನಿನ್ನ ಹೃದಯವನ್ನು ದಾನಮಾಡಿದ್ದೆಯೋ, ಅವನು ದಾನವನ್ನು ಗ್ರಹಣಮಾಡಿದ ಮಾತ್ರಕ್ಕೇ ನಿನಗೆ ಇಷ್ಟೇಕೆ ಸಂತೋಷ? ನೀನಂತೂ ದಾನಮಾಡಿಬಿಟ್ಟೆ; ಅವನು ದಾನವನ್ನಾದರೂ ಸ್ವೀಕರಿಸಲಿ, ತ್ಯಜಿಸಲಿ, ಅದನ್ನು ಕಟ್ಟಿಕೊಂಡು ನಿನಗಾಗುವುದೇನು? ನೀನಿನ್ನೂ ಲೋಕವನ್ನರಿಯದ ಬಾಲೆ. ದಾನಮಾಡತಕ್ಕವರು ಪ್ರತ್ಯಾಶೆಯನ್ನು ಇಟ್ಟುಕೊಂಡು ದಾನ ಮಾಡುವರೇ? ಶೋಭನೆ! ಈಗೇನೋ ನೀನು ಸಂತೋಷಪಡುವೆ, ನಿನ್ನ ಪ್ರಿಯನಿಗೆ ಮುಂದೆ ಸಂಭವಿಸಬಹುದಾದ ಸುಖದುಃಖಗಳಲ್ಲಿಯೂ ನೀನು ಸಹಾನುಭೂತಿಯಿಂದ ಇದೇ ಸಂತೋಷವನ್ನು ಇಟ್ಟುಕೊಂಡರಲ್ಲವೇ ನಿನ್ನ ವಿಶ್ವಾಸಕ್ಕೆ ಫಲವುಂಟಾಗುವುದು. ಆಲೋಚಿಸಿನೋಡು, ನಿನ್ನ ಪ್ರೇಮವು ಏಕರೀತಿಯಾಗಿರಲಿ, ಹಾಗಿದ್ದರೇ ನಿನಗೆ ಶಾಶ್ವತಸುಖವುಂಟು.

ವಿವಾಹದ ದಿನವು ನಿಶ್ಚಯವಾಯಿತು. ದಿನಗಳೂ ಬೇಗಬೇಗನೆ ಕಳೆಯಲಾರಂಭವಾದುವು. ಮನೆಯಲ್ಲಿ ಎಲ್ಲರೂ ವಿವಾಹಕ್ಕೆ ಬೇಕಾದ ಸಾಮಾನುಗಳನ್ನು ಹವಣಿಸುವುದಕ್ಕೆ ಪ್ರಾರಂಭವಾಯಿತು. ಬಂಧು ಬಾಂಧವರೆಲ್ಲರಿಗೂ ಲಗ್ನಪತ್ರಿಕೆಯು ಕಳುಹಿಸಲ್ಪಟ್ಟುವು. ಕ್ರಮವಾಗಿ ಜನಗಳು ರಮೇಶನ ಮನೆಗೆ ಬರಲಾರಂಭಮಾಡಿದರು.

ಚಂದ್ರಮಾಮನಿಗೂ ಪತ್ರವು ಹೋಯಿತು. ಅವನು ತನ್ನ ಜನಗಳನ್ನು ಕರೆದುಕೊಂಡು ರಮೇಶನ ಮನೆಗೆ ಬಂದು, ಬೇಕು ಬೇಕಾದ ಕೆಲಸಗಳನ್ನು ಮಾಡಲಾರಂಭಿಸಿದನು. ರಮೇಶನ ಮನೆಯಲ್ಲಿ ಎಲ್ಲಿ ನೋಡಿದರೂ, ಜನಗಳು ತುಂಬಿಹೋಗಿದ್ದರು.

ಸಾವಿತ್ರಿಯು, ಶೋಭನೆಯ ರಕ್ಷಣೆಯಲ್ಲಿ ವಿಶೇಷವಾಗಿ ಗಮನಕೊಟ್ಟಳು. ಅವಳನ್ನು ವಿಧವಿಧವಾಗಿ ಅಲಂಕರಿಸುವುದೇ ಅವಳಿಗೆ ಮುಖ್ಯವಾದ ಕೆಲಸವಾಯಿತು. ಶೋಭನೆಗಾದರೋ ದಿನೇ ದಿನೇ ದೇಹದಲ್ಲಿ ಅನಿರ್ವಚನೀಯವಾದ ಕಾಂತಿವಿಶೇಷವು ಹೆಚ್ಚುತ ಬಂದಿತೆಂದು ಹೇಳುವುದು ಅತ್ಯುಕ್ತಿಯಾಗಲಾರದು. ಶೋಭನೆಯು ಸಂತೋಷದಿಂದಲೂ ವೇಷಭೂಷೆಗಳಿಂದಲೂ ಸುಂದರಿಯರಲ್ಲಿ ಅಗ್ರಸ್ಥಾನವನ್ನು ಹೊಂದಿದಳು.

---

## ಹತ್ತೊಂಭತ್ತನೆಯ ಪರಿಚ್ಛೇದ

ಹರವಲ್ಲಭ ಬಾಬುವು ದೇಹವನ್ನು ಬಿಡುವನು ; ಆದರೆ ಉಪೇಂದ್ರನಾರಾಯಣನ ಅಕೀರ್ತಿಯಾದರೋ ಲೋಕದಲ್ಲ ಚಿರಕಾಲ ಉದ್ಘೋಷಿತವಾಗುತಲಿರುವುದು. ಉಪೇಂದ್ರನಾರಾಯಣನು ಒಬ್ಬ ಹೊಸ ವೈದ್ಯನನ್ನು ಕರೆಯಿಸಿ ಅವನಿಗೆ ಬೇಕಾದಷ್ಟು ಹಣಕೊಟ್ಟು ತನ್ನ ತಂದೆಗೆ ಔಷಧಕೊಡುವಾಗ ಅದರಲ್ಲಿ ವಿಷವನ್ನು ಹಾಕಿ ಕೊಡಬೇಕೆಂದು ಹೇಳಿದನು. ಏತಕ್ಕೆಂದರೆ, ಹರವಲ್ಲಭನ ರೋಗವು ಜಾಗ್ರತೆಯಾಗಿ ವಾಸಿಯಾಗತಕ್ಕದುದಲ್ಲವೆಂದು ಉಪೇಂದ್ರನು ತಿಳಿದಿದ್ದನು. ತಂದೆಗೆ ರೋಗವು ವಾಸಿಯಾದ ಹೊರತು ರಮೇಶನು ಶೋಭನೆಯನ್ನು ತನಗೆ ಕೊಟ್ಟು ವಿವಾಹ ಬೆಳೆಸಲಾರನೆಂದು ಆಲೋಚಿಸಿ ಉಪೇಂದ್ರನು ಇಂತಹ ನೀಚಕೃತ್ಯದಲ್ಲಿ ಪ್ರವೃತ್ತನಾದನು. ಉಪೇಂದ್ರನ ಇಷ್ಟವಿದ್ದಂತೆಯೇ ಹರವಲ್ಲಭನು ದಿನೇ ದಿನೇ ಮರಣೋನ್ಮುಖನಾಗುತಿದ್ದನು.

ಹರವಲ್ಲಭನ ಮನೆಯಲ್ಲಿ ಎಲ್ಲರೂ ಬಹಳ ವಿಷಣ್ಣರಾಗಿ ಕುಳಿತಿರುವರು. ಉಪೇಂದ್ರನೊಬ್ಬನು ಮಾತ್ರ ಒಳೊಳಗೆ ಬಹಳ ಸಂತೋಷಪಡುತಲಿದ್ದನು. ರಾಧಾನಾಥನು ಉಪೇಂದ್ರನ ಕೋಣೆಯಲ್ಲಿ ಕುಳಿತು ಸುರೆಯನ್ನು ಪಾನಮಾಡುತಲಿದ್ದನು. ಮಧ್ಯೇ ಮಧ್ಯೇ ಉಪೇಂದ್ರನಿಗೂ ಸ್ವಲ್ಪ ಸ್ವಲ್ಪ ಕೊಡುತಲಿದ್ದನು. ಆಕಾಲಕ್ಕೆ ಸರಿಯಾಗಿ ಒಬ್ಬ ಭೃತ್ಯನು ಬಂದು ಉಪೇಂದ್ರನ ಕೈಗೆ ಒಂದು ಕಾಗದವನ್ನು ಕೊಟ್ಟನು. ಉಪೇಂದ್ರನು ಮೇಲೆ ನೋಡಿ ಯಾವುದೋ ಭೋಜನಾಹ್ವಾನ ಪತ್ರಿಕೆಯಿರಬಹುದೆಂದು ಉದಾಸೀನತೆಯಿಂದ ಕಾಗದವನ್ನು ಮೇಜಿನ

ಮೇಲೆ ಬಿಸುಟನು. ಅವನ ಮನಸ್ಸಿಗೆ ಏನೋ ತೋರಿ ಆ ಕಾಗದವನ್ನು ಮತ್ತೆ ತೆಗೆದುಕೊಂಡು ಒಡೆದು ನೋಡಿದನು. ಕಾಗದವನ್ನು ಓದುತ ಓದುತ ಉಪೇಂದ್ರನಿಗೆ ಸ್ವಲ್ಪ ಹೊತ್ತಿನೊಳಗಾಗಿ ಮುಖವು ಕೆಂಪೇರಿತು ; ತುಟಿಗಳು ಅದುರಿದುವು. ಕಣ್ಣುಗಳಿಂದ ಬೆಂಕಿಯ ಕಿಡಿಗಳೇ ಉದುರುತ್ತಿದ್ದವು. ಕೋಪವು ದೇಹವನ್ನು ಧರಿಸಿ ಅವತರಿಸಿದೆಯೋ ಎಂಬಂತೆ ಕಾಣಿಸಿಕೊಂಡನು. ಕಾಗದವು ಓದಿಯಾಯಿತು. ಮತ್ತೆ ಓದಿದನು. ತೃಪ್ತಿಯಾಗಲಿಲ್ಲ. ಮತ್ತೊಂದಾವೃತ್ತಿ ಕಾಗದವನ್ನು ಓದಿ ರಾಧಾನಾಥನ ಕೈಗೆ ಕೊಟ್ಟು "ನೋಡಿದೆಯೋ ಮೋಸಗಾರಿಕೆ!" ಎಂದನು. ರಾಧಾನಾಥನು ಕಾಗದವನ್ನು ಓದಿ ನೋಡಿ "ಇದೇನು ?" ಎಂದನು.

ಉಪೇಂದ್ರ—ಇದೇನು-ಎಂದರೇನು ? ನಡೆಯುವುದೇ ಹೀಗೆ, ಅದಿರಲಿ. ಆ ವಿವಾಹವು ನಡೆಯದೇ ಇರುವುದಕ್ಕೆ ಹೇಗೆ ಅಡ್ಡಿಮಾಡಬೇಕೋ ಹಾಗೆ ಉಪಾಯವನ್ನು ಆಲೋಚಿಸು. ರಮೇಶನು ನನಗೆ ಅಪಮಾನಮಾಡುವುದಕ್ಕೆ ಹೀಗೆಲ್ಲಾ ಮಾಡಬಹುದು ? ಹಾಗಿಲ್ಲದಿದ್ದರೆ ಇದರ ಅರ್ಥವೇನು ? ಈ ಅಪಮಾನವನ್ನು ನಾನೆಂದಿಗೂ ಸಹಿಸಲಾರೆನು.

ರಾಧಾ—ನಿಶ್ಚಯ. ಇಂತಹ ಅಪಮಾನವನ್ನು ಸಹಿಸುವುದು ಆರಿಂದಲೂ ಸಾಧ್ಯವಲ್ಲ.

ಉಪೇಂದ್ರ—ಇದಕ್ಕೇನು ಪ್ರತೀಕಾರಮಾಡೋಣ ಹೇಳು ?

ರಾಧಾ—ನಾನಾ ವಿಧವಾಗಿ ಉಪಾಯಗಳುಂಟು ; ನಿನಗೇನು ಅಭಿಪ್ರಾಯವೋ ಅದನ್ನು ತಿಳಿಸಿದರೆ ಅದರಂತೆಯೇ ಮಾಡಬಹುದು.

ಕಾಗದ ನೋಡಿದಾಗಿನಿಂದಲೂ ಉಪೇಂದ್ರನ ಹೃದಯದಲ್ಲಿ ದುಃಖವು ಬಲವಾಗಿ ಆವರಿಸಿಕೊಂಡಿತು. ಅವನ ಹೃದಯದಲ್ಲಿ ಒಂದೇ ಕಾಲದಲ್ಲಿ ಕೋಪ ದುಃಖ ಪಿತೃಮರಣ ವ್ಯಾಪಾರ ಎಲ್ಲವೂ ಸೇರಿದುವು. ಆವಳನ್ನು ಹೊಂದಬೇಕೆಂಬ ಕುತೂಹಲದಿಂದ ಪೂರ್ವಾಪರವಿವೇಚನೆಯಿಲ್ಲದೆ ನೀಚಕೃತ್ಯದಲ್ಲಿ ಪ್ರವೃತ್ತನಾದೆನೋ, ಆವಳಿಗೋಸ್ಕರ ನನ್ನ ತಂದೆಯನ್ನು ಕೊಲ್ಲಿಸಲು ಯತ್ನಿಸಿದೆನೋ, ಆ ಶೋಭನೆಯನ್ನು ಈಗ ಯಾರೋ ಮದುವೆ ಮಾಡಿಕೊಳ್ಳುವರಂತೆ. ಈ ಅತ್ಯಾಚಾರವನ್ನು ನಾನು ಹೇಗೆ ತಾನೆ ಸಹಿಸಲಿ ? ಈ ವಿವಾಹಕ್ಕೆ ವಿಘ್ನವುಂಟಾಗುವ ಹಾಗೆ ನಾನು ಮಾಡಬೇಕಾದ ಪ್ರಯತ್ನವೆಲ್ಲವನ್ನೂ ಮಾಡುವೆನು, ಎಂದು ಕೊಂಚ ಹೊತ್ತು ಹಾಗೆಯೇ ಆಲೋಚಿಸಿ "ರೇಘೋ! ಶೋಭನೆಯು ನನ್ನ ಅಂಕ

ವನ್ನು ಅಲಂಕರಿಸಬೇಕು. ಅದಕ್ಕಾಗಿ ಮಾಡಬೇಕಾದ ಕೆಲಸವನ್ನು ನೀನು ಮಾಡು" ಎಂದು ಹೇಳಿದನು.

ರಾಧಾನಾಥ—ನನ್ನ ಅಭಿಪ್ರಾಯವೂ ಅದೇ. ಇದಕ್ಕಾಗಿ ಅನೇಕ ಜನಗಳು ಬೇಕು. ಯಥೇಷ್ಟವಾಗಿ ದ್ರವ್ಯವೂ ವೆಚ್ಚವಾಗುವುದು.

ಉಪೇಂದ್ರ—ರೇಧೋ! ಎಷ್ಟು ದ್ರವ್ಯಬೇಕಾದರೂ ಕೊಡುವೆನು, ನಾನು ಮಾಡಿರುವ ಪ್ರಯತ್ನದಲ್ಲಿ ನನ್ನ ತಂದೆಯು ಬದುಕುವ ಹಾಗಿಲ್ಲ. ನನ್ನ ತಂದೆಯ ಐಶ್ವರ್ಯವೆಲ್ಲವೂ ನನ್ನದಲ್ಲದೆ ಮತ್ತಾರದು? ರಾಧಾನಾಥನು ಅಪೇಕ್ಷಿಸುವಷ್ಟು ದ್ರವ್ಯವನ್ನು ಕೊಡಬೇಕೆಂದು ನಾನು ಅಪ್ಪಣೆಮಾಡಿರುವೆನು. ಬೇಕಾದಷ್ಟು ಹಣವನ್ನು ತೆಗೆದುಕೊಂಡು ಹೊರಡು, ಆದರೆ ಮಾತ್ರ ಮಾಡತಕ್ಕ ಕೆಲಸವು ಗೋಪ್ಯವಾಗಿರಲಿ.

ರಾಧಾನಾಥ—ಅದಕ್ಕೇಕೆ ಸಂದೇಹ? ನಾನದೆಲ್ಲವನ್ನೂ ಸರಿಯಾಗಿ ನೋಡಿಕೊಳ್ಳುವೆನು.

ಉಪೇಂದ್ರ—ರೇಧೋ! ಕೇಳು, ಇಷ್ಟೇ ಅಲ್ಲ. ರಮೇಶನು ನನಗೆ ಅಪಮಾನಮಾಡಿದುದಕ್ಕಾಗಿ ಅವನ ಮೇಲಿನ ಹೊಟ್ಟೆಯ ಕಿಚ್ಚನ್ನು ತೀರಿಸಿಕೊಳ್ಳಬೇಕು. ನಾನು ಮಾಡತಕ್ಕ ಕೆಲಸಕ್ಕೆ ಕುಂದುಂಟಾಗಬಾರದು. ನೀನುಮಾಡತಕ್ಕ ಕೆಲಸವು ನನಗೆ ಮರ್ಮಭೇದಿಯಾಗಿರಕೂಡದು. ನೀನು ಇದೆಲ್ಲವನ್ನೂ ಸರಿಯಾಗಿ ಆಗಮಾಡದೇ ನಿಶ್ಚಿಂತನಾಗುವುದಾದರೆ ಪ್ರಯೋಜನವಿಲ್ಲ. ನೀನು ಅನೇಕ ವಿಷಯದಲ್ಲಿ ನನಗೆ ಪರಮಬಂಧುವು. ಈಗ ಆ ಬಂಧುತ್ವವನ್ನು ಕಾಪಾಡಿಕೊಳ್ಳಬೇಕೆಂಬ ಅಪೇಕ್ಷೆಯು ನಿನಗಿದ್ದಲ್ಲಿ, ಈಗ ನನಗೆ ಸಂಭವಿಸಿರುವ ದುಃಖದಲ್ಲಿ ನೀನು ಸ್ವಲ್ಪವಾದರೂ ಮನಗರಗಿ ನನ್ನ ಕೆಲಸವನ್ನು ಸಾಧಿಸಿ ಕೊಡುವೆ. ಈಗಿನ ಅವಸ್ಥೆಯಲ್ಲಿ ನಾನು ಪ್ರಾಣವನ್ನಾದರೂ ಬಿಡಬಲ್ಲೆನು. ನಿರ್ಲಕ್ಷ್ಯವಾಗಿ ನನ್ನ ಸಂಪತ್ತೆಲ್ಲವನ್ನೂ ವೆಚ್ಚ ಮಾಡಬಲ್ಲೆನು. ಆದರೆ ಶೋಭನೆಯನ್ನು ಹೊಂದುವ ಆಶೆಯನ್ನು ಮಾತ್ರ ಬಿಡಲಾರದವನಾಗಿರುವೆನು. ರಾಧಾನಾಥ! ಶೋಭನೆಯನ್ನು ಹೊಂದುವೆನೆಂಬ ಆಶೆಯಲ್ಲಿ ಇಂದಿರೆಯನ್ನು ವಿಶೇಷವಾಗಿ ನಿರ್ಬಂಧಮಾಡಲಿಲ್ಲ. ಧರ್ಮಾಧರ್ಮಗಳೆಂಬ ವಿವೇಚನೆಯು ನನಗಿಲ್ಲ. ಶೋಭನೆಯು ನನ್ನ ಹಸ್ತಗತಳಾಗುವುದೇ ನನ್ನ ಉದ್ದೇಶ. ನೀನು ಜಾಗ್ರತೆಯಾಗಿ ಹೋಗಿ ಕೆಲಸವನ್ನು ಸಾಧಿಸು. ನನ್ನ ತಂದೆಯು ಸತ್ತೊಡನೆಯೇ ನಾವು ನಮಗೆ ತೋರಿದಂತೆ ಮಾಡಿಕೊಳ್ಳೋಣ.

ಉಪೇಂದ್ರನ ಮಾತನ್ನು ಕೇಳಿ, ರಾಧಾನಾಥನು ಏನನ್ನೂ ಮಾತನಾಡದೇ ಅಲ್ಲಿಂದ ಎದ್ದು ಹೊರಟುಹೋದನು.

ಹರವಲ್ಲಭನು ದಿನೇದಿನೇ ಕ್ಷೀಣನಾಗುತ್ತಾ ಬಂದನು. ಮೃತ್ಯುವಿನ ದೃಷ್ಟಿಯು ಅವನ ಮೇಲೆ ಪೂರ್ಣವಾಗಿಬಿದ್ದಿತು. ಹರವಲ್ಲಭನು ಮರಣಯಾತನೆಯಿಂದ ಬಹಳವಾಗಿ ಸಂಕಟಪಡಲಾರಂಭಿಸಿದನು. ಈ ವರ್ತಮಾನವು ಎಲ್ಲೆಲ್ಲಿಯೂ ಹರಡಿಕೊಂಡಿತು. ಹರವಲ್ಲಭನನ್ನು ನೋಡುವುದಕ್ಕೋಸ್ಕರ ಅನೇಕ ಜನಗಳು ಬಂದು ಸೇರಿದರು. ಅವರಲ್ಲಿ ನಿಜವಾಗಿಯೂ ವ್ಯಸನಪಡತಕ್ಕವರೂ, ಸಂತೋಷಪಡತಕ್ಕವರೂ, ಬೇಕಾದವರೂ, ಬೇಡದವರೂ ಎಲ್ಲರೂ ಸೇರಿದ್ದರು. ಇಷ್ಟು ಜನಗಳ ಮಧ್ಯದಲ್ಲಿ ಒಬ್ಬನು ಮಾತ್ರ ಬಹಳವಾಗಿ ವ್ಯಸನಪಟ್ಟನು. ಮುಖದಲ್ಲಿ ಶೋಕದ ಗುರುತು ಇಲ್ಲದಿದ್ದರೂ ಕಣ್ಣುಗಳಿಂದ ಮಾತ್ರ ನೀರು ಸುರಿಯುತ್ತಿತ್ತು. ಇವನೇ ಹರವಲ್ಲಭನ ಏಕಮಾತ್ರಪುತ್ರನಾದ ಉಪೇಂದ್ರನಾರಾಯಣ ಬಾಬು.

ಹರವಲ್ಲಭನು ಮೃತ್ಯುಶಯ್ಯೆಯಲ್ಲಿ ಬಿದ್ದು ಒದೆದಾಡುತ್ತಿದ್ದರೂ ಲಕ್ಷ್ಯವಿಲ್ಲದೆ ಉಪೇಂದ್ರನು ಸುರಾಪಾನಮಾಡತೊಡಗಿದನು. ತಂದೆಯು ಸಾಯುವ ವರೆಗೂ ಸುರಾದೇವಿಯು ಉಪೇಂದ್ರನನ್ನು ಬಿಡಲೊಲ್ಲಳು. ಮದ್ಯವು ಉಪೇಂದ್ರನ ತಲೆಗೆ ಚೆನ್ನಾಗಿ ಏರಿ ತಂದೆಯ ಮರಣಕೋಸ್ಕರವಾಗಿ ಅತ್ತು ಅತ್ತು ಸಾಕಾಗಿ ಕಣ್ಣುಗಳು ಕೆಂಪಾಗಿ ಹೋಗಿವೆಯೋ ಎಂಬಂತೆ ಜನಗಳಿಗೆ ಬೋಧೆಯಾಗುತಲಿತ್ತು. ತಂದೆಯು ಇನ್ನೂ ಸಾಯಲಿಲ್ಲವೆಂಬುವ ವ್ಯಸನಮಾತ್ರ ಉಪೇಂದ್ರನ ಹೃದಯವನ್ನು ಆವರಿಸಿಕೊಂಡು ಅವನನ್ನು ಬಹಳವಾಗಿ ಸಂಕಟಪಡಿಸಿತು. ಅವನಿಗೆ ಹರವಲ್ಲಭನು ಕ್ಷಣಕಾಲ ಬದುಕುವುದೂ ಯುಗವಾಗಿ ಕಂಡುಬರುತ್ತಿದ್ದಿತು. "ತಂದೆಯು ಯಾವಾಗ ಸತ್ತಾನು? ಯಾವಾಗ ಅವನನ್ನು ಸುಟ್ಟು ಬೂದಿಮಾಡಿ ಮನೆಗೆ ಬಂದೇನು? ಯಾವಾಗ ಆಸ್ತಿಯೆಲ್ಲವೂ ಕೈವಶವಾದೀತು?" ಎಂಬುದೊಂದೇ ಅವನಿಗೆ ಮುಖ್ಯವಾಗಿ ಬೇಕಾದ ವಿಷಯವಾಗಿದ್ದಿತು.

ನೋಡುತಿದ್ದ ಹಾಗೆಯೇ ಹರವಲ್ಲಭನ ಸ್ವರವು ಬಂಧಿಸಿತು. ಮೇಲುಸಿರಿಗಿಟ್ಟಿತು. ಕಣ್ಣಾಲಿಯು ತಿರುಗಲಾರಂಭಿಸಿತು. ಕ್ಷಣಕಾಲದಲ್ಲಿಯೇ ಎಲ್ಲವೂ ನಿಷ್ಪಂದವಾಯಿತು. ಹರವಲ್ಲಭನು ದೇಹವನ್ನು ತ್ಯಾಗಮಾಡಿ ಬಿಟ್ಟನು. ಅವನು ಸತ್ತನೋ ಇಲ್ಲವೋ ಎಲ್ಲರೂ ತಂತಮ್ಮ ಮನೆಗಳಿಗೆ ಹೊರಟುಹೋದರು. ಅರ್ಧ ಘಂಟೆಯ ಮುಂಚೆ ಯಾವ ಮನೆಯು ಜನಗಳಿಂದ ತುಂಬಿಹೋಗಿದ್ದಿತೋ ಆ ಮನೆಯು ಹರವಲ್ಲಭನು ಸತ್ತೊಡನೆಯೇ ಜನಶೂನ್ಯವಾಗಿ ಹೋಯಿತು. ಉಪೇಂ

ದ್ರನೂ ಮತ್ತೆ ಕೆಲವರೂ ಆಕೂಡಲೆ ಶವವನ್ನು ಶ್ಮಶಾನಕ್ಕೆ ಸಾಗಿಸಿಕೊಂಡು ಹೊರಟುಹೋದರು.

---

## ಇಪ್ಪತ್ತನೆಯ ಪರಿಚ್ಛೇದ

ಶ್ಮಶಾನದಲ್ಲಿ ಹರವಲ್ಲಭನ ಚಿತೆಯು ಉರಿಯಲಾರಂಭಿಸಿತು. ಚಿತೆಯಿಂದ ಹೊರಟ ಧೂಮರಾಶಿಯು ನದಿಯ ತೀರವನ್ನೆಲ್ಲಾ ವ್ಯಾಪಿಸಿತು. ಅಗ್ನಿದೇವನು ಹರವಲ್ಲಭನ ಶರೀರವನ್ನು ಭಸ್ಮಮಾಡಿಬಿಡುತಲಿರುವಾಗ ಉಪೇಂದ್ರನು ಕೆಲವು ವೇಳೆ ಶವದ ಹತ್ತಿರ ಹೋಗುವನು. ಮತ್ತೆ ಕೆಲವು ವೇಳೆ ದೂರದಲ್ಲಿ ಹೋಗಿ ಕಳಿತುಕೊಳ್ಳುವನು.

ಸಂಧ್ಯಾಕಾಲವಾಯಿತು. ಸೂರ್ಯದೇವನು ಅಸ್ತಾಚಲಪ್ರಣಯಿಯಾದನು; ಅವನ ಅರುಣಕಿರಣಗಳು ಉಚ್ಚವಾದ ಗಿಡಗಳ ಮೇಲುಭಾಗದಲ್ಲಿ ನರ್ತನ ಮಾಡುತ್ತಿದ್ದುವು; ಇನ್ನೂ ಪಕ್ಷಿಗಳು ತಂತಮ್ಮ ಮನೆಗಳಿಗೆ ಹೊರಡಲು ಯತ್ನ ಮಾಡಿರಲಿಲ್ಲ. ದೇವಾಲಯಗಳಲ್ಲಿ ಇನ್ನೂ ವಾದ್ಯಗಳಿಗೆ ಪ್ರಾರಂಭವಾಗಿರಲಿಲ್ಲ. ಲಜ್ಜಾಶೀಲೆಯಾದ ಸಂಧ್ಯೆಯು ಸುಂದರವಾದ ವಸ್ತ್ರಾಲಂಕಾರಗಳನ್ನು ಧಾರಣ ಮಾಡಿ ಮೆಲ್ಲಮೆಲ್ಲನೆ ಹೊರಗೆ ಹೊರಟಳು. ಪಶ್ಚಿಮದಿಕ್ಕಿನಲ್ಲಿ ಒಂದು ಸಣ್ಣದಾದ ಮೇಘದ ಖಂಡವು ಕಾಣಿಸಿಕೊಂಡಿತು. ರಮಣಿಯರ ಯೌವನದಂತೆ—ವರ್ಷಾ ಕಾಲದ ನದೀಜಲದಂತೆ-ಆ ಮೇಘಖಂಡವು ಕ್ರಮವಾಗಿ ಗಗನಪ್ರಾಂತವೆಲ್ಲವನ್ನೂ ತುಂಬಿಬಿಟ್ಟಿತು. ಒಂದೆರಡಾವೃತ್ತಿ ಮಿಂಚಿತು. ಗಾಳಿಯು ಭೋರೆಂದು ಭೋರ್ಗರೆದು ಬೀಸಲಾರಂಭಿಸಿತು. ಅದನ್ನು ನೋಡಿ ಶ್ಮಶಾನದಲ್ಲಿದ್ದವರೆಲ್ಲರಿಗೂ ಭಯವುಂಟಾಯಿತು. "ವಿಶೇಷವಾಗಿ ಮಳೆಬರುವ ಸಂಭವವಿದೆ. ಮಳೆಯು ಬಂದಲ್ಲಿ ಚಿತೆಯು ಆರಿಹೋಗುವುದೇನೋ ನಿಜ" ಎಂದು ಎಲ್ಲರೂ ಆಲೋಚಿಸ ಲಾರಂಭಿಸಿದರು. ಉಪೇಂದ್ರನ ಆಲೋಚನೆ ಮಾತ್ರ ಬೇರೆರೂಪವಾಗಿದ್ದಿತು. "ಈ ಸಮಯದಲ್ಲಿ ಒಂದು ಬಟ್ಟಲು ಸುರೆಯು ಮಾತ್ರ ದೊರೆಯುವುದಾಗಿದ್ದರೆ ನಾನೆಂತಹ ಧನ್ಯನಾಗಿರುತ್ತಿದ್ದೆನೋ! ಸುರೆಯನ್ನು ಪಾನಮಾಡುವುದಕ್ಕೆ ಕಾಲ ವೇನು? ಅಕಾಲವೇನು? ಸುರೆ ಸಿಕ್ಕುವುದೇ ಕಾಲ, ಅದಿಲ್ಲದಿರುವುದೇ ಅಕಾಲ ನನಗೆ ಇಂತಹ ಅಕಾಲವು ಪ್ರಾಪ್ತವಾಗಬಹುದೆ?" ಎಂದು ದೂರದಲ್ಲಿ ಒಂದು ಕಡೆ ಕುಳಿತು ಚಿಂತಿಸುತ್ತಿದ್ದನು. ಎಲ್ಲರೂ ನೋಡುತ್ತಿದ್ದ ಹಾಗೆಯೇ ಬಿರುಗಾಳಿ ಯೆದ್ದಿತು; ವಾಯುಸಂಬಂಧದಿಂದ ವಿಶಾಲಾಕ್ಷಿಯು ತನ್ನ ತರಂಗಗಳೆಂಬ ಕೈಗ ಳಿಂದ ಅತಿಶಯವಾದ ಸಂತೋಷವನ್ನು ತೋರ್ಪಡಿಸುತಲಿದ್ದಳು. ತರಂಗಗಳ ಆಘಾತದಿಂದ ನದಿಯ ತೀರದಲ್ಲಿ ಮರಳು ದಿಬ್ಬಗಳೂ ಕರಗಿ ಕರಗಿ ನೀರಿನಲ್ಲಿ ಸೇರಿ

ಹೋಗುತಿದ್ದುವು. ಕ್ರಮಕ್ರಮವಾಗಿ ಸುಯ್ಯೆಂದು ಮಳೆಯ ಹನಿಗಳು ಬೀಳಲಾರಂಭಮಾಡಿದವು. ಮಳೆಯು ಬರುತಬರುತ ಬಲವಾಯಿತು. ಶ್ಮಶಾನದಲ್ಲಿದ್ದವರೆಲ್ಲರೂ ದಿಕ್ಕಾಪಾಲಾಗಿ ಎಲ್ಲೆಲ್ಲಿಗೋ ಓಡಿಹೋದರು. ಮಳೆಯು ಬಿಡುವ ಹಾಗೆ ಕಂಡುಬರಲೇ ಇಲ್ಲ. ಆಕಾಲದಲ್ಲಿ ಯಾರಾದರೂ ತಲೆಯೆತ್ತಿ ಮೇಲೆ ನೋಡುವುದಾಗಿದ್ದರೆ, ಅಂತರಿಕ್ಷವು ಒಂದೇ ಆವೃತ್ತಿ ಕಳಚಿ ಕೆಳಗೆ ಬಿದ್ದು ಬಿಡುವಂತೆ ಕಾಣಿಸಿಕೊಳ್ಳುತ್ತಿದ್ದಿತು. ನದಿಯ ಜಲವು ವೃದ್ಧಿಯಾಗಿ ಚಿತೆಯ ಹತ್ತಿರಕ್ಕೆ ಬಂದಿತು. ಚಿತೆಯು ನೀರಿನಲ್ಲಿ ತೇಲಲಾರಂಭಿಸಿತು. ಇಷ್ಟರಲ್ಲಿಯೇ ಎಲ್ಲಿಂದಲೋ ಒಬ್ಬ ಸನ್ಯಾಸಿನಿಯು ಆ ಶ್ಮಶಾನಕ್ಕೆ ಬಂದು ತೇಲಿಹೋಗುತಲಿದ್ದ ಹರವಲ್ಲಭನ ಶವವನ್ನು ಹತ್ತಿರದಲ್ಲಿದ್ದ ಒಂದು ಗಿಡಕ್ಕೆ ಕಟ್ಟಿಹಾಕಿದಳು. ಶವವನ್ನು ಕಟ್ಟುತ್ತಿರುವಾಗ ಅಕಸ್ಮಾತ್ತಾಗಿ ಉಪೇಂದ್ರನ ಒಂದು ವಿಕಟವಾದ ಚೀತ್ಕಾರಧ್ವನಿಯು ಕೇಳಿಬಂದಿತು. ಮಳೆಯ ಹನಿಯು ಜೋರಾಗಲು ಶವವಾಹಕರೆಲ್ಲರೂ ಯಥಾಯಥಾ ಓಡಿಹೋದರು. ಉಪೇಂದ್ರನು ಮಾತ್ರ ಒಂದು ಗಿಡದ ಕೆಳಗೆ ಮಳೆಯ ಬಾಧೆಯಿಂದ ನಡುಗುತ ಕುಳಿತಿದ್ದನು. ಗಾಳಿ ಮಳೆಗಳ ಹೊಡೆತವನ್ನು ತಡೆಯಲಾರದೇ ಆ ಗಿಡವು ಲಟ್ಟೆಂದು ಮುರಿದುಬಿದ್ದು ನದಿಯಲ್ಲಿ ಸೇರಿಹೋಯಿತು. ಉಪೇಂದ್ರನು ಚೀತ್ಕಾರಮಾಡುತ್ತಾ ನದಿಯ ವೇಗದಲ್ಲಿ ಬಿದ್ದನು. ಆವ ಕಡೆಯಿಂದ ಆ ಆರ್ತಸ್ವರವು ಕೇಳಿಬಂದಿತೋ ಆಕಡೆಗೆ ಸನ್ಯಾಸಿನಿಯು ಹೊರಟಳು. ಕತ್ತಲೆಯು ಎಲ್ಲೆಲ್ಲಿಯೂ ಆವರಿಸಿತ್ತು. ಮುಂದಿರತಕ್ಕ ಆವುದೊಂದು ಪದಾರ್ಥವೂ ಕಣ್ಣಿಗೆ ಕಾಣುತ್ತಿರಲಿಲ್ಲ. ಸನ್ಯಾಸಿನಿಗೆ ದಿಕ್ಕೇ ತೋರದಂತಾಯಿತು. ಅವಳೂ ಒಂದಾವೃತ್ತಿ ಗಟ್ಟಿಯಾಗಿ ಕೂಗಿದಳು. ಅದಕ್ಕೆ ಉತ್ತರವಾಗಿ ' ನನ್ನನ್ನು ಕಾಪಾಡು ಕಾಪಾಡು. ನಾನು ನೀರಿನಲ್ಲಿ ಬಿದ್ದು ಒದೆದಾಡುತ್ತಿರುವೆನು. ನಾನು ಯಾವ ವೃಕ್ಷವನ್ನು ಆಶ್ರಯಮಾಡಿಕೊಂಡು ಕುಳಿತ್ತಿದ್ದೆನೋ, ಅದೂ ನೀರಿನಲ್ಲಿ ಎಲ್ಲಿಯೋ ತೇಲಿಹೋಯಿತು. ನನ್ನನ್ನು ಕಾಪಾಡು " ಎಂಬುವ ಧ್ವನಿಯು ಕೇಳಿ ಬಂದಿತು.

ಸನ್ಯಾಸಿನಿಗೆ ಧ್ವನಿಯು ಬಂದ ದಿಕ್ಕು ಗೊತ್ತಾಗಿ ಅಲ್ಲಿಗೆ ಹೋದಳು. ಒಂದು ದೊಡ್ಡದಾದ ಮರವು ನೀರಿನಲ್ಲಿ ತೇಲುತ್ತಲೂ ಮುಳುಗುತ್ತಲೂ ಹೋಗುತ್ತಿತ್ತು. ಆ ಗಿಡದಲ್ಲಿ ಯಾವ ಮನುಷ್ಯರೂ ಇದ್ದಂತೆ ಕಂಡುಬರಲಿಲ್ಲ. ಸನ್ಯಾಸಿನಿಯು ಮತ್ತೊಂದಾವೃತ್ತಿ "ಸಹಾಯ ಬೇಡುವವರಾರು ? ಕತ್ತಲೆಯಲ್ಲಿ ಆವುದೂ ಕಂಡುಬರುವುದಿಲ್ಲ. ಮಳೆಯಲ್ಲಿ ನಾನೂ ನನೆದು ಕಷ್ಟಪಡುತ್ತಲಿರುವೆನು " ಎಂದು ಕೂಗಿಕೊಂಡಳು.

ಉಪೇಂದ್ರನು "ನಾನು ಮರದ ಕೊಂಬೆಯೊಂದನ್ನು ಹಿಡಿದುಕೊಂಡು ತೇಲಿಹೋಗುತ್ತಲಿರುವೆನು. ಕೂಡಲೆ ನನ್ನನ್ನು ಕಾಪಾಡದಿದ್ದರೆ ನನ್ನ ಪ್ರಾಣವುಳಿಯಲಾರದು." ಎಂದು ಉತ್ತರವಿತ್ತನು.

ಆ ಸ್ವರವು ಸನ್ಯಾಸಿನಿಗೆ ಮೊದಲು ಎಲ್ಲಿಯೋ ಕೇಳಿದ್ದಂತೆ ತಿಳಿದು ಬಂದಿತು. ಕ್ಷಣಕಾಲದಲ್ಲಿಯೇ, ಅದು ಉಪೇಂದ್ರನಾರಾಯಣನದೆಂದು ಸ್ಥಿರಮಾಡಿದಳು. ಕೂಡಲೆ ಅವಳಿಗೆ ಪೂರ್ವದ ಕಥೆಯೆಲ್ಲವೂ ಜ್ಞಾಪಕಕ್ಕೆ ಬಂದಿತು. ನಾಚಿಕೆ, ಜುಗುಪ್ಸೆ, ಕ್ರೋಧ ಇವೆಲ್ಲವೂ ಏಕಕಾಲದಲ್ಲಿಯೇ ಅವಳ ಹೃದಯವನ್ನು ಆವರಿಸಿದುವು. ಮನಸ್ಸಿನಲ್ಲಿ ವಿಧವಿಧವಾದ ತರ್ಕವಿತರ್ಕಗಳು ಹುಟ್ಟಿದುವು. ಹೇಳಲಸಾಧ್ಯವಾದ ಭಾವಗಳೆಲ್ಲವೂ ತಲೆದೋರಲಾರಂಭಮಾಡಿದುವು. ನೀಚನಾದ ಉಪೇಂದ್ರನ ಮುಖವನ್ನು ಮಾತ್ರ ಮತ್ತೆ ನೋಡಕೂಡದೆಂಬುವುದಕ್ಕೆ ಎಷ್ಟು ಬೇಕೋ ಅಷ್ಟು ಆಲೋಚನೆಯು ಅವಳ ಹೃದಯವನ್ನು ಅಧಿಕಾರ ಮಾಡುತಲಿದ್ದಿತೆಂದು ಹೇಳಿದರೆ ಸಾಕಾಗಿದೆ. ಸನ್ಯಾಸಿನಿಯು ಹಾಗೆಯೇ ಒಂದು ಕ್ಷಣ ನಿಂತು ನೋಡಿದಳು. ನೋಡಿ "ಆವನು ಒಂದು ದಿನವಾದರೂ, ಅನ್ನ ಹಾಕಿ ಪ್ರಾಣರಕ್ಷಣೆ ಮಾಡಿರುವನೋ, ಅವನು ಎಂತಹ ನೀಚನೇ ಆಗಲಿ, ಅವನಿಗೆ ಪ್ರತ್ಯುಪಕಾರ ಮಾಡುವುದು ಧರ್ಮವಾಗಿದೆ. ಈಗಲಾದರೋ, ಅವನು ಮೃತ್ಯುಮುಖದಲ್ಲಿ ಬಿದ್ದು ಸಂಕಟಪಡುತಲಿರುವನು. ಅವನನ್ನು ಇಂತಹ ಕಾಲದಲ್ಲಿ ಕಷ್ಟದಿಂದ ಉದ್ಧಾರ ಮಾಡುವುದಕ್ಕಿಂತಲೂ ಬೇರೆಯುಪಕಾರವುಂಟೆ? ಈ ಸಮಯದಲ್ಲಿ ಅವನನ್ನು ಕೈಲಾದ ಮಟ್ಟಿಗೂ ಯತ್ನಮಾಡಿ ಉದ್ಧರಿಸುವೆನು. ತನ್ಮೂಲಕ ನನ್ನ ಮನೋರಥವನ್ನು ಪೂರ್ಣಮಾಡಿಕೊಳ್ಳುವೆನು." ಹೀಗೆ ಸ್ಥಿರಮಾಡಿಕೊಂಡು ಅವಳು ಮೆಲ್ಲಮೆಲ್ಲನೆ ನದಿಯ ತೀರದಲ್ಲಿ ಹೋಗಿ ನಿಂತಳು. ನದಿಯೊಳಗೆ ಇಳಿದಲ್ಲದೇ ಉಪೇಂದ್ರನನ್ನು ಹಿಡಿದುಕೊಂಡು ಬರುವುದು ಅಸಾಧ್ಯವೆಂದು ಗೊತ್ತಾಯಿತು. ಅನಂತರ ಅವಳು ಕುತ್ತಿಗೆ ವರೆಗೂ ನೀರಿನಲ್ಲಿ ಇಳಿದಳು. ಇಳಿದವಳು ತನ್ನ ಮೇಲು ಹೊದ್ದಿಕೆಯನ್ನು ಉಪೇಂದ್ರನಿದ್ದಲ್ಲಿಗೆ ಎಸೆದಳು. ಉಪೇಂದ್ರನು ಒಂದು ಕೊನೆಯನ್ನು ಹಿಡಿದುಕೊಂಡನು. ಸನ್ಯಾಸಿನಿಯು ಮತ್ತೊಂದು ಕೊನೆಯನ್ನು ತಾನು ಹಿಡಿದುಕೊಂಡು, ಮೆಲ್ಲಮೆಲ್ಲನೆ ಬಟ್ಟೆಯನ್ನು ತನ್ನ ಕಡೆಗೆ ಎಳೆಯಲಾರಂಭಮಾಡಿದಳು. ತರಂಗವು ಉಪೇಂದ್ರನನ್ನು ಒಂದೊಂದು ವೇಳೆ ಮುಳುಗಿಸುತ್ತಲೂ, ಮತ್ತೊಂದು ವೇಳೆ ತೇಲಿಸುತ್ತಲೂ ಅತ್ಯಾಚಾರಮಾಡಲಾರಂಭಿಸಿತು. ಸನ್ಯಾಸಿನಿಯ ಯತ್ನದಿಂದ ಉಪೇಂದ್ರನು ದಡವನ್ನು ಸೇರಿದನು. ಉಪೇಂದ್ರನಿಗೆ ಜ್ಞಾನವು ಪೂರ್ಣವಾಗಿ ಹೋಗಿಬಿಟ್ಟಿದ್ದಿತು. ಇನ್ನು ಸ್ವಲ್ಪಹೊತ್ತು ಅವನು ನೀರಿನಲ್ಲಿಯೇ ಇದ್ದಿದ್ದರೆ, ಅವನ ಜೀವನಚರಿತ್ರೆಯೇ ಕಥಾಮಾತ್ರವಾಗುತಿತ್ತು.

ಸನ್ಯಾಸಿನಿಯು, ಉಪೇಂದ್ರನನ್ನು ತೀರದ ವರೆಗೂ ಸಾಹಸಪಟ್ಟು ಎಳೆದಳು. ಅನಂತರ ಅವನನ್ನು ದಡದ ಮೇಲೆ ತರುವುದಕ್ಕೆ ಬಲುಸಾಹಸಮಾಡಿದಳು. ಸ್ತ್ರೀಯು ಸ್ವಭಾವತಃ ಅಶಕ್ತಳಾದುದರಿಂದ ಪ್ರಾಪ್ತವಯಸ್ಕನಾದ ಆ ಗಂಡ

ಸನ್ನು ಎತ್ತಲಾರದವಳಾಗಿ, ಅವನನ್ನು ಅಲ್ಲಿಯೇ ಕ್ಷಣಕಾಲ ಹಿಡಿದು ನಿಲ್ಲಿಸಿದಳು, ಅವನನ್ನು ಹಿಡಿದುಕೊಂಡಿದ್ದವಳು, ಏನೇನೋ ಚಿಂತಿಸತೊಡಗಿದಳು.

ಸ್ವಲ್ಪ ಹೊತ್ತಿನಲ್ಲಿಯೇ, ಮಳೆಯು ನಿಂತಿತು. ಆಕಾಶವು ಕ್ರಮವಾಗಿ ನಿರ್ಮಲವಾಗುತ ಬಂದಿತು. ಗಾಳಿಯು ಕಮ್ಮಿಯಾಗಿ ನದಿಯ ತರಂಗಗಳ ಆಘಾತವು ನಿಂತಿತು. ಸನ್ಯಾಸಿನಿಯು ಮತ್ತೊಂದಾವೃತ್ತಿ, ಉಪೇಂದ್ರನನ್ನು ಮೇಲಕ್ಕೆ ಎತ್ತಲು ಯತ್ನಿಸಿದಳು. ಆದರೆ ಸಾಧ್ಯವಾಗಲಿಲ್ಲ. ಉಪೇಂದ್ರನನ್ನು ದಡದ ಮೇಲೆ ತರದೆ, ನೀರಿನಲ್ಲಿಯೇ ಬಹಳ ಹೊತ್ತು ಇಟ್ಟಿದ್ದರೆ ಅವನ ಪ್ರಾಣವು ಹೋಗುವ ಸಂಭವವುಂಟೆಂದು ಆಲೋಚಿಸಿ, ಸನ್ಯಾಸಿನಿಯು ಮತ್ತೆ ಎತ್ತಲಾರಂಭಿಸಿದಳು. ಸಾಧ್ಯವಾಗಲಿಲ್ಲ. ಅವಳಿಗೆ ಮಳೆಯ ಬಾಧೆಯಿಂದಲೂ, ವಿಶೇಷವಾಗಿ ಶ್ರಮಪಟ್ಟಿದ್ದುದರಿಂದಲೂ, ಇದ್ದ ಶಕ್ತಿಯೂ ಲುಪ್ತವಾಗಿ ಹೋಗಿದ್ದಿತು.

ಆಕಾಶದಲ್ಲಿ ಚಂದ್ರನು ಕಾಣಿಸಿಕೊಳ್ಳಲು ಯತ್ನಮಾಡುತಲಿದ್ದನು. ಮೆಲ್ಲಮೆಲ್ಲನೆ ಮಂದಮಾರುತವು ಬೀಸಲಾರಂಭಿಸಿತು. ಸನ್ಯಾಸಿನಿಯು ಉಪೇಂದ್ರನನ್ನು ದಡದ ಮೇಲೆ ಹಾಗೆಯೇ ಮಲಗಿಸಿ, ಒಂದೇ ಉಸಿರಿನಲ್ಲಿ ಗ್ರಾಮಕ್ಕೆ ಓಡಿ ಬಂದು ಸಂಗಡ ಒಬ್ಬನನ್ನು ಕರೆದುಕೊಂಡು ನದಿಯ ತೀರಕ್ಕೆ ಬಂದಳು. ಅವನು ಚಂದ್ರಮಾಮನ ದಳದವನಾಗಿದ್ದನು. ಅವನ ಸಂಗಡಿಗನೊಬ್ಬನು ಜತೆಯಲ್ಲಿ ಬಂದನು. ಬಂದವನು ಉಪೇಂದ್ರನ ಮುಖವನ್ನು ನೋಡಿ, ಆನಂತರ ಸನ್ಯಾಸಿನಿಯನ್ನು ನೋಡಿದನು. ಸನ್ಯಾಸಿನಿಯು ಅವನ ಅಭಿಪ್ರಾಯವನ್ನು ತಿಳಿದು, "ನಿನ್ನ ಅಭಿಪ್ರಾಯವು ಗೊತ್ತಾಯಿತು. ಆದರೂ ಚಿಂತೆಯಿಲ್ಲ. ಅವನು ಉಪೇಂದ್ರನ ಶುಶ್ರೂಷೆಯನ್ನು ಮಾಡಲಿ, ನೀನು ನನ್ನ ಜತೆಯಲ್ಲಿ ಬಾ" ಎಂದು ಹೇಳಿ ಒಬ್ಬನನ್ನು ಜತೆಯಲ್ಲಿ ಕರೆದುಕೊಂಡು ಹರವಲ್ಲಭನ ಅರ್ಧದಗ್ಧವಾದ ಶವವು ಇದ್ದಲ್ಲಿಗೆ ಹೋದಳು. ಸನ್ಯಾಸಿನಿಯು ಆ ಶವವನ್ನು ನೀರಿನಲ್ಲಿ ಕೊಚ್ಚಿಕೊಂಡು ಹೋಗದಂತೆ, ಒಂದು ಬಳ್ಳಿಯಿಂದ ಕಟ್ಟಿಹಾಕಿದ್ದಳು. ಶವದ ಹತ್ತಿರ ಹೋಗಿ ಅನುಚರನನ್ನು ನೋಡಿ "ಉಪೇಂದ್ರನು ಪ್ರೇತಸಂಸ್ಕಾರವನ್ನು ಮಾಡುವುದಾದರೆ ಮಾಡಲಿ. ಇಲ್ಲವಾದರೆ ನಾವೇ ಮಾಡಿಬಿಡೋಣ. ಅಲ್ಲಿಯವರೆಗೂ, ನಾಯಿ ನರಿ ತಿನ್ನದಂತೆ ಶವವನ್ನು ಕಾಪಾಡಿಕೊಂಡಿರು" ಎಂದು ಹೇಳಿದಳು. ಸನ್ಯಾಸಿನಿಯು ಹೀಗೆ ಹೇಳಿದುದನ್ನು ಕೇಳಿ, ಒಬ್ಬ ಅನುಚರನು ಅವಳನ್ನು ಕುರಿತು "ತಾಯಿ! ಅವನು ನಿನ್ನ ವಿಷಯದಲ್ಲಿ ಎಷ್ಟೋ ಅತ್ಯಾಚಾರ ಮಾಡಿ ನಿನ್ನನ್ನು ಮಿತಿಮೀರಿದ ಕಷ್ಟಕ್ಕೆ ಗುರಿಮಾಡಿದನೋ, ಅವನ ವಿಷಯದಲ್ಲಿ ನೀನು ತೋರಿಸುವ ಸದ್ವ್ಯವಹಾರವನ್ನು ನೋಡಿ ನಮಗೆ ಬಹಳ

ಸಂತೋಷವಾಗುವುದು. ನಿನ್ನ ಆ ಮನಃಸಂಕಲ್ಪವು ಈಗ ಎಲ್ಲಿ ಹೋಯಿತು ?" ಎಂದು ಕೇಳಿದನು. ಅವಳು, ಅನುಚರನ ಮಾತಿಗೆ ಸ್ವಲ್ಪ ನಕ್ಕು "ವಿಪತ್ತಿನಲ್ಲಿ ರಕ್ಷಿಸುವುದು ನಮಗೆ ಪರಮಧರ್ಮ. ಆದರೂ ನಾನು ಮಾಡಿರುವ ಪ್ರತಿಜ್ಞೆಯನ್ನು ನೆರವೇರಿಸಿಕೊಳ್ಳದೆ ಈ ಪ್ರಾಣವನ್ನು ಬಿಡಲಾರೆನು," ಎಂದಳು. ಈ ಸನ್ಯಾಸಿನಿಯೇ ನಮಗೆ ಪೂರ್ವಪರಿಚಿತೆಯಾದ ಇಂದಿರೆಯು. ಇವಳು ಈಗ ಚಂದ್ರಮಾಮನ ಪೋಷ್ಯವರ್ಗದಲ್ಲಿ ಸೇರಿದವಳಾಗಿದ್ದಳು. ಇವಳು ಒಂದು ದಳದವರಿಗೆ ಯಜಮಾನಿಯಾಗಿದ್ದುಕೊಂಡು ಕೆಲಸವನ್ನು ಮಾಡುತಿದ್ದಳು. ಆವುದೋ ಕೆಲಸಕ್ಕೆ ಅವಳು ಹೋಗುತ್ತಿರುವಾಗ, ನದಿಯ ತೀರದಲ್ಲಿ ಹಿಂದೆ ಹೇಳಿದ ಸಂದರ್ಭವನ್ನು ನೋಡಿದಳು. ಅಲ್ಲಿ ತಾನು ಮಾಡಬೇಕಾದ ಕೆಲಸವನ್ನು ಮಾಡತೊಡಗಿದಳು. ಅವಳ ಯತ್ನದಿಂದಲೇ ಉಪೇಂದ್ರನ ಪ್ರಾಣವು ಉಳಿದುಕೊಂಡಿತು. ಅನಂತರ ಅವನನ್ನು ಮನೆಗೆ ಕಳುಹಿಸಿಕೊಟ್ಟು, ಹರವಲ್ಲಭನ ಅರ್ಧದಗ್ಧವಾದ ದೇಹಕ್ಕೆ ಪ್ರೇತಸಂಸ್ಕಾರವನ್ನು ಮಾಡಿ, ಇಂದಿರೆಯು ತನ್ನ ಅನುಚರರೊಡನೆ ಮನೆಗೆ ತೆರಳಿದಳು.

---

## ಇಪ್ಪತ್ತೊಂದನೆಯ ಪರಿಚ್ಛೇದ

ರಾಧಾನಾಥನು ಹರವಲ್ಲಭನ ಮನೆಯನ್ನು ಬಿಟ್ಟವನು ಊರಿನೊಳಗೆ ಪ್ರವೇಶಮಾಡಿದನು. ಊರಿನಲ್ಲಿ ಸ್ವಲ್ಪ ದೂರ ಹೋಗಿ ಒಂದು ಜೀರ್ಣವಾದ ಮನೆಯನ್ನು ಸೇರಿ "ರಾಮದಾಸ" ಎಂದು ಕೂಗಿದನು.

ರಾಮದಾಸನು ಆಗ ಮನೆಯಲ್ಲಿ ನಿದ್ರೆಮಾಡುತಲಿದ್ದನು. ರಾಮದಾಸನು ಹಿಂದಿನ ರಾತ್ರಿಯಲ್ಲಿ, ಕಳ್ಳತನ ಮಾಡಲು ಬಲುದೂರ ಹೋಗಿದ್ದನು. ಬೆಳಗಾಗುತಲೇ ಮನೆಗೆ ಹಿಂದಿರುಗಿ ಬರಲು ಅನುಕೂಲಿಸದೇ ರಾತ್ರಿ ಮನೆಗೆ ಬಂದು ಮಲಗಿಬಿಟ್ಟಿದ್ದನು. ಯಾವ ಕಾರಣಕ್ಕೋಸ್ಕರ ಇವನು ಬೇರೆ ಗ್ರಾಮಕ್ಕೆ ಹೋಗಿದ್ದನೋ, ಆ ಕೆಲಸವು ಚಂದ್ರನಾಥನ ಕಡೆಯವರಿಂದ ತಡೆಯಲ್ಪಟ್ಟಿತು. ರಾಮದಾಸನು ಭಯದಿಂದಲೂ ದುಃಖದಿಂದಲೂ ಮುಖ ಕೆಟ್ಟವನಾಗಿ ಮನೆಗೆ ಬಂದು ಸೇರಿದನು. ಕೂಡಲೆ ನಿದ್ರೆಯೂ ಬಂದಿತು.

ರಾಧಾನಾಥನು ಮತ್ತೊಂದಾವರ್ತಿ ಕೂಗಿದನು. "ರಾಮದಾಸ"

ರಾಮದಾಸನು ಎಚ್ಚೆತ್ತನು, ಆದರೆ ಉತ್ತರಕೊಡಲಿಲ್ಲ. ಚಂದ್ರಮಾಮನ ಕಡೆಯವರು ಯಾರಾದರೂ ಬಂದಿರಬಹುದೋ ಏನೋ ಎಂದು ಅವನು ಉತ್ತರ ಕೊಡದೆ ಮಲಗಿದ್ದನು. ಅಷ್ಟರಲ್ಲಿಯೇ ರಾಮದಾಸನ ಹೆಂಡಿತಿಯು ಎದ್ದು

ಬಂದು, ಬಾಗಲಿನ ಸಂದಿಯಲ್ಲಿ ನೋಡಿ, ಒಳಗೆ ಬಂದು ಗಂಡನ ಕಿವಿಯಲ್ಲಿ ಏನೋ ಹೇಳಿ ಮತ್ತೆ ಮಲಗಿಕೊಂಡಳು.

ರಾಧಾನಾಥನು ಮತ್ತೆ "ರಾಮದಾಸ" ಎಂದು ಕೂಗಿದನು.

ಅದಕ್ಕೂ ಉತ್ತರವಿಲ್ಲ. ಕೊನೆಗೆ ರಾಧಾನಾಥನು ಬಾಗಿಲನ್ನು ಹೊಡೆಯಲಾರಂಭಿಸಿದನು. ರಾಮದಾಸನು ಒಳಗಿನಿಂದಲೇ "ಯಾರು?" ಎಂದು ಕೇಳಿದನು.

ರಾಧಾನಾಥನು ತನ್ನ ಪರಿಚಯವನ್ನು ಕೊಟ್ಟನು. ರಾಮದಾಸನು ಕೂಡಲೆ ಎದ್ದುಬಂದು ಬಾಗಿಲು ತೆಗೆದು "ಯಾರು? ಬಾಬುವೆ" ಎಂದನು.

ರಾಧಾ—ಹೌದು.

ರಾಮ—ಇದೇನು ಈಗ ಬಂದುದು? ಬಾಬು!

ರಾಧಾನಾಥನು ರಾಮದಾಸನ ಕಿವಿಯಲ್ಲಿ ಏನೇನೋ ಹೇಳಿದನು. ಅದನ್ನು ಕೇಳಿ ರಾಮದಾಸನು "ನನ್ನ ಮನೆಯಲ್ಲಿ ನನ್ನ ಹೆಂಡಿತಿ ಹೊರತಾಗಿ ಮತ್ತಾರೂ ಇಲ್ಲ" ಎಂದನು. ಹಾಗಾದರೂ ರಾಧಾನಾಥನು ರಾಮದಾಸನ ಕಿವಿಯಲ್ಲಿ ಪಿಸಪಿಸನೆ ಮಾತನಾಡಿದನು. ಅನಂತರ ಇಬ್ಬರೂ ಮನೆಯಿಂದ ಹೊರಗೆ ಸ್ವಲ್ಪದೂರ ಹೋಗಿ ಏನೇನೋ ಮಾತನಾಡತೊಡಗಿದರು. ರಾಮದಾಸನು ಒಪ್ಪಿಕೊಂಡನು. ಆಮೇಲೆ ಇಬ್ಬರೂ ಮನೆಯೊಳಗೆ ಬಂದರು. ರಾಮದಾಸನು ಒಂದು ಹರಕು ಕಂಬಳಿಯನ್ನು ಹಾಸಿದನು. ಇಬ್ಬರೂ ಅದರ ಮೇಲೆ ಕುಳಿತುಕೊಂಡು ಮಾತನಾಡಿದರು. ಅವರ ಮಾತುಗಳು ಪ್ರಕೃತಕಾರ್ಯಕ್ಕೆ ಅಷ್ಟೇನೂ ಸಂಬಂಧಪಟ್ಟದ್ದಲ್ಲವಾದುದರಿಂದ, ಅದನ್ನು ಇಲ್ಲಿ ವಿವರಿಸಲು ನಾವು ಅಷ್ಟು ಉತ್ಸಾಹಪರರಾಗಿಲ್ಲ.

ಸ್ವಲ್ಪ ಹೊತ್ತಿನ ಮೇಲೆ, ರಾಮದಾಸನು "ಬಾಬು! ಈ ಕಾರ್ಯವನ್ನು ನಾನು ಮಾಡಿಕೊಡುವೆನು. ನಾವು ಅವನ ಆಶ್ರಿತರು, ಅವನಿಗೋಸ್ಕರವಾಗಿ ನಾವು ಯಾವ ಕೆಲಸಬೇಕಾದರೂ ಮಾಡಬಲ್ಲೆವು. ಆದರೆ ಈ ಕೆಲಸವು ಬಹಳ ಗೋಪ್ಯವಾಗಿರಬೇಕು. ನಮಗೆ ಮತ್ತಾರ ಭಯವೂ ಇಲ್ಲ. ಚಂದ್ರಮಾಮನ ಕಡೆಯವರಿಗೆ ತಿಳಿದರೆ, ನಮ್ಮ ಕೆಲಸವೆಲ್ಲವೂ ಬೂದಿಯಲ್ಲಿ ಹೋಮಮಾಡಿದಂತಾಗುವುದು. ಈ ಕೆಲಸಕ್ಕೆ ಸ್ವಲ್ಪ ದ್ರವ್ಯವೂ ವೆಚ್ಚಮಾಡಬೇಕಾಗುವುದು" ಎಂದನು.

ರಾಧಾ—ಹಣಕ್ಕೆ ಚಿಂತಿಸಬೇಡ. ಚಂದ್ರಮಾಮನ ದಳದವರಿಗೆ ಮಾತ್ರ ತಿಳಿಯದಂತೆ ಕೆಲಸಮಾಡು.

ಈರೀತಿ ನಾನಾಪ್ರಕಾರವಾಗಿ ಮಾತುಕತೆಗಳು ನಡೆದು, ಇಬ್ಬರೂ ಉಪೇಂದ್ರನ ಮನೆಗೆ ಹೋಗಲು ಸಿದ್ಧರಾದರು. ರಾಮದಾಸನು ಮನೆಯೊಳಗೆ ಹೋಗಿ ಹೆಂಡಿತಿಯೊಡನೆ ಏನೋ ಮಾತನಾಡಿ ರಾಧಾನಾಥನ ಜತೆಯಲ್ಲಿ ಹೊರಟು ಹೋದನು.

---

## ಇಪ್ಪತ್ತೆರಡನೆಯ ಪರಿಚ್ಛೇದ

ಈ ದಿವಸ ಶೋಭನೆಗೆ ವಿವಾಹ. ದಾಸದಾಸಿಯರೆಲ್ಲರೂ ಸಂಭ್ರಮದಿಂದ ಹೊಸದಾದ ವಸ್ತ್ರಗಳನ್ನು ಧಾರಣೆಮಾಡಿರುವರು. ಕೆಲವರು ನೂತನಾಲಂಕಾರಗಳನ್ನು ಧರಿಸಿಕೊಂಡು ಮನೆಯ ಯಜಮಾನಿಯಂತೆ ಕೆಲಸಮಾಡುತಲಿರುವರು. ಕೆಲವರು ಕೆಲಸಮಾಡುವರಂತೆ ಅಲ್ಲಿ ಇಲ್ಲಿ ತಿರುಗಾಡಲಾರಂಭಿಸಿರುವರು. ಮನೆಯಲ್ಲಿ ಎಲ್ಲಿ ನೋಡಿದರೂ ಜನಗಳ ಗಲಭೆ. ಅಂತಃಪುರದಲ್ಲಾದರೋ ಹೆಂಗುಸರ ಕೆಲಸವೇ ಕೆಲಸ. ಆರನ್ನಾದರೂ ಮಾತನಾಡಿಸುವ ಹಾಗಿರಲಿಲ್ಲ. ಮಾತನಾಡಿಸಿದರೂ ಉತ್ತರಕೊಡುವಷ್ಟು ವ್ಯವಧಾನವಿರಲಿಲ್ಲ. ಹುಡುಗರು ತಿಂಡಿಗೋಸ್ಕರವಾಗಿ ಓಡಾಡುತಲಿದ್ದರು. ಮುದುಕಿಯರು ಕುಳಿತ ಕಡೆಯೇ ಸಣ್ಣ ಸಣ್ಣ ಉಪನ್ಯಾಸಗಳನ್ನು ಮಾಡುತಲಿದ್ದರು. ಯುವತಿಯರಿಗಾದರೋ ಪುರುಷನ ಮುಖಾವಲೋಕನವಾಯಿತೆಂದರೆ ನಾಚಿಕೊಂಡು ತಲೆತಪ್ಪಿಸಿಕೊಳ್ಳುವುದರಲ್ಲಿಯೇ ಕಾಲವು ಕಳೆದು ಹೋಗುತ್ತಿದ್ದಿತು. ಈ ಸೊಬಗನ್ನು ಎಷ್ಟು ವರ್ಣನೆ ಮಾಡಿದರೂ ಸಾಲದು.

ಸಾವಿತ್ರಿಯು ಈದಿನ ಬಲು ಸಂತೋಷದಿಂದಿರುವಳು. ಶೋಭನೆಗೆ ವಿವಾಹವೆಂದು ಅವಳು ಅನೇಕಜನ ಬಡವರಿಗೆ ದಾನಧರ್ಮಗಳನ್ನು ಮಾಡಿದಳು. ಮನೆಗೆ ಬಂದ ಸುಮಂಗಲಿಯರಿಗೆ ಯೋಗ್ಯತಾನುಗುಣವಾದ ಉಪಚಾರವನ್ನು ಮಾಡಿ ಎಲ್ಲರನ್ನೂ ಸಂತೋಷಪಡಿಸಿದಳು. ಇತರರು ಅಲಂಕಾರಮಾಡಿದರೆ ಸರಿಹೋಗದೆಂದು ಶೋಭನೆಗೆ ತಾನೇ ಉಡುಗೆತೊಡುಗೆಗಳನ್ನು ತೊಡಿಸುವಳು. ಶೋಭನೆಗೆ ಹೇಗೆ ಹೇಗೆ ಇಷ್ಟವೋ ಹಾಗೆಲ್ಲ ಅಲಂಕಾರ ಮಾಡುವಳು. ಆವ ತೆರದಲ್ಲಾದರೂ ಶೋಭನೆಯು ಸಂತೋಷವಾಗಿರಬೇಕೆಂಬುದೇ ಅವಳಿಗೆ ಪರಮೋದ್ದೇಶವಾಗಿದ್ದಿತು.

ಶೋಭನೆಗೆ ಅಲಂಕಾರ ಮಾಡಿದನಂತರ ನಡೆಯಬೇಕಾದ ಮಂಗಳಾಚಾರಗಳು ಒಂದೊಂದಾಗಿ ನಡೆದುವು. ಇವುಗಳಿಂದ ಶೋಭನೆಯ ಕಾಂತಿಯು ದ್ವಿಗುಣಿತವಾಯಿತು. ಆ ಕಾಂತಿಯಿಂದ ರಮೇಶಬಾಬುವಿನ ಮನೆಯು ಆನಂದದಿಂದ

ನಗುತ್ತಿರುವದೋ ಎಂಬಂತೆ ನೋಟಕರಿಗೆ ತೋರಿಬರುತ್ತಿದ್ದಿತು. ಕ್ರಮವಾಗಿ ಸಂಧ್ಯಾಕಾಲವಾಯಿತು. ಮನೆಯೆಲ್ಲ ದೀಪಮಾಲೆಗಳಿಂದಲಂಕೃತವಾಯಿತು. ವಿವಾಹೋತ್ಸವಕ್ಕಾಗಿ ಕರೆಯಲ್ಪಟ್ಟ ಜನರು ಒಬ್ಬರಾಗುತಲೆ ಒಬ್ಬರು ಬರಲಾರಂಭಿಸಿದರು. ಬಂದವರೆಲ್ಲರೂ ವರನನ್ನು ನೋಡುವುದರಲ್ಲಿ ಬಹಳ ಉತ್ಸುಕರಾಗಿದ್ದರು. ಬರುತ ಬರುತ ಚೆನ್ನಾಗಿ ಕತ್ತಲೆಯಾಯಿತು. ಅಷ್ಟು ಹೊತ್ತಿನ ವರೆಗೂ ವರನೂ ವರನ ಕಡೆಯ ಜನಗಳೂ ಯಾರೂ ಬಾರದಿರುವುದನ್ನು ನೋಡಿ ರಮೇಶನ ಮನಸ್ಸು ಸ್ವಲ್ಪ ವ್ಯಸ್ತವಾಯಿತು. ವರನನ್ನು ನೋಡುವುದಕ್ಕೆ ಜನಗಳ ಮೇಲೆ ಜನಗಳನ್ನು ನದಿಯ ತೀರದ ವರೆಗೂ ಕಳುಹಿಸಿದುದಾಯಿತು. ಯಾರಿಂದಲೂ ಸರಿಯಾದ ಉತ್ತರ ಬರಲಿಲ್ಲ. ರಮೇಶನು ತಾನೇ ನೋಡುವುದಕ್ಕೆ ಸ್ವಲ್ಪದೂರ ಹೊರಟನು. ಕೊಂಚ ಹೊತ್ತಿನ ಮೇಲೆ "ದೋಣಿಯನ್ನು ಹತ್ತಿ ಬಂದೀಪುರದಿಂದ - ನಂದನಪುರಕ್ಕೆ ಬರುತಿದ್ದವರು ಕೆಲವರು ನಡುನೀರಿನಲ್ಲಿ ಮುಳುಗಿಕೊಂಡರು" ಎಂಬ ಸುದ್ದಿಯೆದ್ದಿತು.

ಇಂತಹ ಸಮಾಚಾರಗಳು ಅಡಗಿರುವುದು ಬಹಳ ಕಷ್ಟ. ಈ ವರ್ತಮಾನವು ಎಲ್ಲೆಲ್ಲಿಯೂ ಹರಡಲಾರಂಭಿಸಿತು. ರಮೇಶಬಾಬುವೂ ಇದನ್ನು ಕೇಳಿದನು. ಅವನು ಕೇಳಿದುದರಲ್ಲಿ "ಯಾವ ದೋಣಿಯಲ್ಲಿ ವರನು ಇದ್ದನೋ ಅದೂ ಅದರೊಡನೆ ಮತ್ತೊಂದೂ ಎರಡು ದೋಣಿಗಳೂ ನೀರಿನಲ್ಲಿ ಮುಳುಗಿ ಹೋದುವು. ಆದರೆ ಅವುಗಳಲ್ಲಿದ್ದ ಒಬ್ಬರಿಬ್ಬರು ಮಾತ್ರ ಬದುಕಿಕೊಂಡರು; ಉಳಿದವರ ವರ್ತಮಾನವೇ ಗೊತ್ತಾಗಲಿಲ್ಲ, ಎಂದು ತಿಳಿಯಿತು. ಆದರೆ ವರನ ವಿಚಾರಮಾತ್ರ ಯಾರೂ ಅರಿಯದವರಾಗಿದ್ದರು. ಬಹಳ ಹೊತ್ತಾದರೂ ವರನು ಬಾರದಿರುವುದನ್ನು ನೋಡಿ ರಮೇಶನ ಮನೆಯಲ್ಲಿ ವಿಶೇಷವಾದ ಗದ್ದಲವೆದ್ದಿತು.

ಕ್ರಮವಾಗಿ ಈ ಸಂಗತಿಯು ಹೆಂಗುಸರ ಕಿವಿಗೆ ಬಿದ್ದಿತು. ಸಾವಿತ್ರಿಯೂ ಕೇಳಿದಳು. ರಮೇಶನ ತಾಯಿಯೂ ಕೇಳಿದಳು. ಶೋಭನೆಯೂ ಕೇಳಿದಳು. ಇದನ್ನು ಕೇಳಿದವರೆಲ್ಲರೂ ಕೇವಲ ವ್ಯಸನದಿಂದ ಕಣ್ಣಿನಲ್ಲಿ ನೀರಿಟ್ಟರು. ಸಾವಿತ್ರಿಗೆ ಎದೆಯೇ ಒಡೆದುಹೋಗಿ ಅವಳ ಆಶೆಯೆಲ್ಲವೂ ಭಗ್ನವಾಯಿತು. ಸಾವಿತ್ರಿಗೆ ದಿಕ್ಕೇತೋಚದೆ ಗಂಡನನ್ನು ಕಂಡು "ವರಾನ್ವೇಷಣೆಗಾಗಿ ಜನಗಳನ್ನು ಮತ್ತೊಂದು ಸಲ ಕಳುಹಿಸಿಕೊಟ್ಟು ಸಂಗತಿಯನ್ನು ತಿಳಿದುಕೊಂಡು ಬರಬಾರದೇ?" ಎಂದು ಕೇಳಬೇಕೆಂದು ತೋರಿತು. ಉತ್ತರ ಕ್ಷಣದಲ್ಲಿಯೇ ಕೆಟ್ಟ ಸುದ್ದಿಗಳೆಂದಿಗೂ ಸುಳ್ಳಾಗಲಾರದೆಂದು ಮೂರ್ಛಾಹತೆಯಾಗಿ ಬಿದ್ದಳು. ಮಧ್ಯೇ ಮಧ್ಯೇ ಹತಾಶೆಯಾದ ಶೋಭನೆಯ ಮುದ್ದು ಮುಖವು ಜ್ಞಾಪಕಕ್ಕೆ ಬರುತ್ತಿತ್ತು.

ಸಾವಿತ್ರಿಯು ಕೂಡಲೆ ಶೋಭನೆಯಿದ್ದ ಕೋಣೆಗೆ ಹೋದಳು. ಅಲ್ಲಿ ಶೋಭನೆಯು ಇಲ್ಲದಿರುವುದನ್ನು ನೋಡಿ ಮಹಡಿಯ ಮೇಲಕ್ಕೆ ಹೋದಳು. ಅಲ್ಲಿಯೂ ಅವಳಿಲ್ಲದಿರುವುದನ್ನು ಕಂಡು ಮನೆಯೆಲ್ಲವನ್ನೂ ಹುಡುಕಲಾರಂಭಮಾಡಿದಳು.

ರಮೇಶನು ಈ ದಾರುಣವಾದ ವಾರ್ತೆಯನ್ನು ಕೇಳಿ ಜ್ಞಾನಹೋದವನಾಗಿ ಭೂಮಿಯ ಮೇಲೆ ಬಿದ್ದನು. ಅವನ ಹತ್ತಿರ ಇದ್ದವರೆಲ್ಲರೂ ಆ ಕೂಡಲೆ ರಮೇಶನಿಗೆ ಉಪಚರಿಸಿದರು. ಅನೇಕ ಸಂಗತಿಗಳು ನಡೆದು ಕೊನೆಗೆ ಬಂದಿದ್ದವರೆಲ್ಲರೂ "ಈ ಮುಹೂರ್ತವನ್ನೇ ಸಾಧಿಸಬೇಕು" ಎಂದು ರಮೇಶನಿಗೆ ಸಲಹೆಯನ್ನು ಕೊಟ್ಟರು. ನಂದನಪುರದಲ್ಲಿಯೇ ಒಬ್ಬವರನು ನಿಶ್ಚಿತನಾದನು. ರಮೇಶನಿಗೆ ಅದು ಇಷ್ಟವಾಗಿರಲಿಲ್ಲ. ಆದರೂ ಯತ್ನವಿಲ್ಲದೆ ಆ ವರನನ್ನೇ ಒಪ್ಪಬೇಕಾಗಿ ಬಂದಿತು.

ಈ ವಿವಾಹವು ಒಂದು ವಿಧವಾಗಿ ನಿಶ್ಚಯವಾಯಿತು. ಅಷ್ಟರಲ್ಲಿಯೇ "ಎಲ್ಲೆಲ್ಲಿ ಹುಡುಕಿದರೂ ಶೋಭನೆಯು ಸಿಕ್ಕಲಿಲ್ಲ" ಎಂಬ ಸುದ್ದಿಯೂ ರಮೇಶನ ಕಿವಿಗೆ ಬಿದ್ದಿತು. ಕೂಡಲೆ ರಮೇಶನು ಅಂತಃಪುರದೊಳಗೆ ಪ್ರವೇಶಮಾಡಿದನು. ಸಾವಿತ್ರಿಯು ಹುಚ್ಚಿಯಂತೆ ಮನೆಯಲ್ಲಿ ಅಲೆಯುತ್ತಿದ್ದಳು. ಇದನ್ನು ನೋಡಿ ರಮೇಶನ ಹೊಟ್ಟೆಯಲ್ಲಿ ಬೆಂಕಿಬಿದ್ದಂತಾಯಿತು. ರಮೇಶನು ಸಾವಿತ್ರಿಯೊಡನೆ ಒಂದು ಮಾತನ್ನೂ ಆಡದೆ ಮನೆಯೆಲ್ಲವನ್ನೂ ಹುಡುಕಲಾರಂಭಿಸಿದನು. ಮನೆಯೆಲ್ಲವನ್ನೂ ನೋಡಿ, ಒಂದು ವೇಳೆ ಶೋಭನೆಯು ನೀರಿನಲ್ಲಿ ಬಿದ್ದುಬಿಟ್ಟರಬಹುದೆಂದು ಮನಸ್ಸಿಗೆ ಹೊಳೆದು ಪುಷ್ಕರಿಣಿಯ ಬಳಿಗೆ ಹೋದನು. ನಾಲ್ಕೈದು ಜನಗಳನ್ನು ನೀರಿನಲ್ಲಿ ಬಿಟ್ಟು ಹುಡುಕಿಸಿದನು. ಯಾರಿಗೂ ಏನೂ ಸಿಕ್ಕಲಿಲ್ಲ. ಅಷ್ಟು ಹೊತ್ತಿಗೆ ಸರಿಯಾಗಿ ಚಂದ್ರಮಾಮನು ರಮೇಶನ ಮನೆಗೆ ಬಂದನು. ರಮೇಶನು ಚಂದ್ರಮಾಮನೊಡನೆ ನಡೆದ ಸಂಗತಿಗಳನ್ನು ತಿಳಿಸಿ ಪುಷ್ಕರಿಣಿಯಲ್ಲಿ ಬಲೆಬಿಟ್ಟು ಹುಡುಕಿಸಬೇಕೆಂದು ತಿಳಿಸಿದನು. ಬಲೆಬಿಟ್ಟದುದಾಯಿತು. ಶೋಭನೆಯು ಉಟ್ಟುಕೊಳುವ ಸೀರೆಯೊಂದು ಸಿಕ್ಕಿತು. ರಮೇಶನು ಇದನ್ನು ನೋಡಿ ನೆಲಕ್ಕೆ ಇಳಿದುಹೋದನು. ಸ್ವಲ್ಪಹೊತ್ತು ಸುಮ್ಮನೆ ಚಂದ್ರಮಾಮನನ್ನು ನೋಡತೊಡಗಿದನು. ಆಗ ಚಂದ್ರಮಾಮನು ಗಳಗಳನೆ ಅಳುತ್ತಿದ್ದನು. ಅವನ ಕಣ್ಣುಗಳಲ್ಲಿ ನೀರು ಯಾವಾಗಲೂ ಕಾಣಿಸಿಕೊಂಡುದೇ ಇಲ್ಲ. ಅಂತಹವನ ಮೈಯೆಲ್ಲವೂ ಧಾರಾಕಾರವಾಗಿ ಸುರಿಯುತಲಿದ್ದ ಕಣ್ಣೀರಿನಿಂದ ತೊಯಿದುಹೋಗುತಿದ್ದಿತು. ರಮೇಶನಾಗಲಿ ಚಂದ್ರಮಾಮನಾಗಲಿ ಯಾರೂ ಯಾವಮಾತನ್ನೂ ಆಡಲಿಲ್ಲ. ಇಬ್ಬರೂಮೂಕರಂತೆ ಇದ್ದುಬಿಟ್ಟರು. ಸಾವಿತ್ರಿಯು ಚೀತ್ಕಾರಮಾಡತೊಡಗಿದಳು.

ಎರಡುಮೂರು ಗಂಟೆಗಳಿಗೆ ಮುಂಚೆ ಯಾವ ಮನೆಯು ಆನಂದದಿಂದ ತುಂಬಿ ತುಳುಕಾಡುತಲಿದ್ದಿತೋ, ಈಗ ಆ ಮನೆಯು ಪ್ರಲಾಪಕ್ಕೆ ತೌರುಮನೆ ಯಾಗಿ ಪರಿಣಮಿಸಿತು. ಮನೆಯಲ್ಲಿ ಎಲ್ಲಿ ನೋಡಿದರೂ ರೋದನ ಧ್ವನಿಯು ಕೇಳಿ ಬರುತಲಿದ್ದಿತು. ಹಾ, ಸಂಸಾರವೇ! ನಿನ್ನ ಹಣೆಯ ಬರಹವೇ ಇಷ್ಟು! ನಿನ್ನ ಅಮಾನುಷವಾದ ಲೀಲೆಯನ್ನು ತಿಳಿಯುವುದಕ್ಕೆ ಮನುಷ್ಯರಾದ ನಮಗೆ ಸಾಧ್ಯ ವಲ್ಲ. ನೀನು ಕ್ಷಣಕಾಲದಲ್ಲಿಯೇ ಯಾವನೋ ಒಬ್ಬನನ್ನು ಚಕ್ರವರ್ತಿ ಯನ್ನಾಗಿ ಮಾಡುವೆ. ಮತ್ತೆ ಉತ್ತರಕ್ಷಣದಲ್ಲಿಯೇ ಅವನನ್ನು ಬೀದಿಯಲ್ಲಿ ಸಂಚರಿಸುವ ಬಿಕಾರಿಯನ್ನಾಗಿ ಮಾಡಿಬಿಡುವೆ! ನೀನು ಯಾರನ್ನು ತಾನೇ ಅಳುವ ಹಾಗೆ ಮಾಡುವುದಿಲ್ಲ. ನಿನ್ನ ಆಧಿಪತ್ಯದಲ್ಲಿ ಯಾರು ಸುಖವಾಗಿದ್ದು ಪ್ರಾಣವನ್ನು ಬಿಟ್ಟಿರುವರು? ಯಾರು ನಿನ್ನಪಾಶದಿಂದ ಮುಗ್ಧರಾಗಿ ದುಃಖ ಪಡೆದಿರುವರು? ಸಂಸಾರ! ನಿನ್ನ ಮಾಯೆ, ನಿನ್ನ ಪಾಶ, ಇವುಗಳನ್ನು ತಡೆ ಯಲು ಯಾರಿಂದ ತಾನೇ ಸಾಧ್ಯ? ರಮಣೀ ಪಾಠಕರಿರಾ! ಸಂಸಾರಸಾಗರದಲ್ಲಿ ಧುಮ್ಮಿಕ್ಕುವುದಕ್ಕೆ ಮುಂಚೆಯೇ, ಚೆನ್ನಾಗಿ ಆಲೋಚಿಸಿ ಕೆಲಸಮಾಡಿ. ಹಿಂದು ಮುಂದು ಕಾಣದೆ ದುಡುಕಿದರೆ ಯಾವಜ್ಜೀವವೂ ಅನರ್ಥವು ತಪ್ಪದು. ಪುರುಷ ಪಾಠಕ ಮಹಾಶಯ! ನೀವು ಉದಾಸೀನಮಾಡಬೇಡಿ, ಸಂಸಾರದ ಯೋಗ್ಯತೆ ಯನ್ನು ತಿಳಿಯದ ಮೇಲೆ ಅದರಲ್ಲಿ ಮಗ್ನರಾಗಬೇಡಿರಿ, ಮೊದಲೇ ಸಂಸಾರದಿಂದ ಪಾರಾಗುವುದು ಒಳ್ಳೆಯದು.

ವಿಶೇಷ ಮಾತಿನಿಂದೇನೂ ಪ್ರಯೋಜನವಿಲ್ಲ. ಆರಾತ್ರಿಯಲ್ಲಿ ಶೋಭನೆಗೆ ಯಾವ ವಿವಾಹವು ಆಗಬೇಕೆಂದು ನಿಷ್ಕರ್ಷೆಯಾಗಿದ್ದಿತೋ ಅದು ನಡೆಯದೇ ಹೋಯಿತು. ರಮೇಶಬಾಬುವಿಗೆ ದಿಕ್ಕೇ ತೋರದಂತಾಯಿತು. ಚಂದ್ರ ಮಾಮನು ಈ ವಿದ್ಯಮಾನದ ಕಾರಣವನ್ನು ಆಮೂಲವಾಗಿ ತಿಳಿಯಲೋಸುಗ ಜತೆಯಲ್ಲಿ ಒಬ್ಬನನ್ನು ಕರೆದುಕೊಂಡು ರಮೇಶನ ಮನೆಯಿಂದ ತೆರಳಿದನು. ಬಂದಿದ್ದವರೆಲ್ಲರೂ ಕೇವಲ ವ್ಯಸನಾಕ್ರಾಂತರಾಗಿ ಒಬ್ಬೊಬ್ಬರಾಗಿ ತಂತಮ್ಮ ಮನೆಗೆ ಹೊರಟುಹೋದರು.

---

## ಇಪ್ಪತ್ತಮೂರನೆಯ ಪರಿಚ್ಛೇದ

ರಾಮದಾಸನ ಬುದ್ಧಿಕೌಶಲದಿಂದ ವಿಶಾಲಾಕ್ಷೀ ನದಿಯಲ್ಲಿ ನರೇಂದ್ರ ನಾಥನ ದೋಣಿಯು ಮುಳುಗಿಕೊಂಡ ಸ್ವಲ್ಪ ಹೊತ್ತಿನ ಮೇಲೆ ಚಂದ್ರಮಾಮನ ಎರಡು ಮೂರು ದೋಣಿಗಳು ನದಿಯಲ್ಲಿ ಕಾಣಿಸಿಕೊಂಡುವು. ದೋಣಿಯಲ್ಲಿದ್ದವರು

ಆಗ ಎಲ್ಲಿಗೋ ಕಳ್ಳತನಕ್ಕೆ ಹೊರಟಿದ್ದರು. ಸ್ವಲ್ಪಕಾಲಕ್ಕೆ ಮುಂಚೆ ಕೆಲವು ಜನರು ನೀರಿನಲ್ಲಿ ಮುಳುಗಿಕೊಂಡರೆಂದು ಅವರು ಕೇಳಿದರು. ಅವರು ಕೂಡಲೆ ಆ ಸ್ಥಳಕ್ಕೆ ದೋಣಿಯನ್ನು ನಡೆಯಿಸಿಕೊಂಡು ಹೋಗಿ, ನೀರಿನಲ್ಲಿ ಬಿದ್ದವರನ್ನು ಉದ್ಧಾರಮಾಡುವುದಕ್ಕೆ ಯತ್ನಪಟ್ಟರು. ಅವರ ಯತ್ನದಿಂದ ಕೆಲವು ಜನ ಬದುಕಿಕೊಂಡರು. ಕೆಲವರು ಕೈಗೆ ಸಿಕ್ಕದೇಹೋದರು. ನೀರಿನಿಂದ ಉದ್ಧಾರವಾದವರ ಪೈಕಿ ನರೇಂದ್ರನಾಥನು ಒಬ್ಬನು. ಚಂದ್ರಮಾಮನ ಕಡೆಯವರಾದ ಕಳ್ಳರು ನೀರಿನಿಂದ ಎತ್ತಲ್ಪಟ್ಟವರನ್ನು ತಮ್ಮ ದೋಣಿಯಲ್ಲಿ ಕುಳ್ಳಿರಿಸಿಕೊಂಡು ನದಿಯ ತೀರಕ್ಕೆ ತಂದು ಬಿಟ್ಟರು. ನರೇಂದ್ರನಾಥನಿಗೆ ಇನ್ನೂ ಚೆನ್ನಾಗಿ ಸಂಜ್ಞಾಲಾಭವಾಗಿರಲಿಲ್ಲವಾದ್ದುದರಿಂದ, ಅವನನ್ನು ದೋಣಿಯಲ್ಲಿಯೇ ಕುಳ್ಳಿರಿಸಿಕೊಂಡು, ಕಳ್ಳರು ಬಂದ ದಾರಿಯನ್ನು ಹಿಡಿದರು.

ದೋಣಿಯಲ್ಲಿದ್ದ ಜನಗಳ ಪ್ರಯತ್ನದಿಂದ ನರೇಂದ್ರನಿಗೆ ಕ್ರಮೇಣ ಜ್ಞಾನಲಾಭವಾಯಿತು. ನರೇಂದ್ರನು ಇದ್ದ ದೋಣಿಯಲ್ಲಿ ನಾಲ್ಕಾರು ಜನ ಮಾತ್ರವಿದ್ದರು. ಉಳಿದ ದೋಣಿಗಳು ಸ್ವಲ್ಪದೂರದಲ್ಲಿ ಬರುತಿದ್ದವು. ನಾಲ್ಕೈದು ಗಂಟೆಗಳು ಕಳೆದನಂತರ, ಎಲ್ಲಾ ದೋಣಿಗಳೂ ಒಂದು ಕಡೆ ಸೇರಿದುವು. ಜನಗಳೆಲ್ಲರೂ ಒಟ್ಟಿಗೆ ಸೇರಿ ಮನಬಂದಂತೆ ವಿಧವಿಧವಾಗಿ ಮಾತನಾಡತೊಡಗಿದರು. ನಡೆದ ಎಲ್ಲಾ ಮಾತುಕತೆಗಳನ್ನೂ ಇಲ್ಲಿ ತಿಳಿಸಬೇಕಾದ ಸಂಭವವಿಲ್ಲ. ಆ ಮಾತುಗಳಲ್ಲಿ ಪ್ರಕೃತಕ್ಕೆ ಬೇಕಾದುವುಗಳನ್ನು ಮಾತ್ರ ಇಲ್ಲಿ ತಿಳಿಸುವೆವು. ಕಳ್ಳರಲ್ಲಿ ಒಬ್ಬನು "ಈ ಮನುಷ್ಯನಿಗೆ ಜ್ಞಾನಬಂದಿತು. ಇವನು ನಾವು ಆಡಿದ ಮಾತುಗಳೆಲ್ಲವನ್ನೂ ಕೇಳುತ್ತಿರುವನು. ಇವನನ್ನು ನಾವು ಬಿಡುವುದು ಯುಕ್ತವಾಗಿ ಕಾಣುವುದಿಲ್ಲ. ಇವನನ್ನು ಯಜಮಾನರ ಬಳಿಗೆ ಕರೆದುಕೊಂಡುಹೋಗಿ ಬಿಡುವುದು ಲೇಸು" ಎಂದು ಹೇಳಿದನು. ಕೆಲವರು ಇದಕ್ಕೆ ಒಪ್ಪಲಿಲ್ಲ. ಅನೇಕರು ಇವನನ್ನು ಹೊರಗೆ ಬಿಡುವುದು ಸರಿಯಲ್ಲವೆಂದು ನಿರ್ಧಾರಮಾಡಿದ ಮೇಲೆ, ನರೇಂದ್ರನಾಥನನ್ನು ಜತೆಯಲ್ಲಿಯೇ ಕರೆದುಕೊಂಡು ಹೊರಟರು. ಸ್ವಲ್ಪ ದೂರ ಹೊರಟ ಮೇಲೆ, ಮತ್ತೊಬ್ಬನು "ನಾವು ಯಾವ ಮಾರ್ಗವನ್ನು ಹಿಡಿದು ಹೋಗುವೆವೋ ಅದು ಈ ಹೊಸಬನಿಗೆ ಗೊತ್ತಾಗುವುದು ಯುಕ್ತಿಯುಕ್ತವಾಗಿಲ್ಲ" ಎಂದನು. ಇದಕ್ಕೆ ಎಲ್ಲರೂ ಒಪ್ಪಿದರು. ಅಷ್ಟರಲ್ಲಿಯೇ ಮತ್ತೊಬ್ಬನು ಬಂದು, ನರೇಂದ್ರನಾಥನ ಕಣ್ಣುಗಳನ್ನು ಬಟ್ಟೆಯಿಂದ ಕಟ್ಟಿ "ನೀನು ಯಾರೇ ಆಗು, ಈ ಕಟ್ಟನ್ನು ಬಿಚ್ಚಿದಲ್ಲಿ ನಿನ್ನ ಪ್ರಾಣವು ಕ್ಷಣಾರ್ಧವೂ ನಿಲ್ಲಲಾರದೆಂದು ತಿಳಿ. ನೀನು ಬಲು ಎಚ್ಚರಿಕೆಯಿಂದ ಇರಬೇಕಾಗುವುದು" ಎಂದು ಹೆದರಿಸಿದನು.

ಇದನ್ನು ಕೇಳಿ, ನರೇಂದ್ರನ ಮನಸ್ಸಿನಲ್ಲಿ ಭಯಸಂಚಾರವುಂಟಾಯಿತು. ಅವನು ಮನದಲ್ಲಿಯೇ "ನಾನಾದರೋ ಶತ್ರುಗಳ ಮಧ್ಯದಲ್ಲಿ ಬಿದ್ದಿರುವೆನು,

ತಪ್ಪಿಸಿಕೊಳ್ಳಲು ಉಪಾಯಾಂತರವಿಲ್ಲ. ದೇವರು ಮಾಡಿಸಿದಂತಾಗಲಿ" ಎಂದು ನಿಶ್ಚಯಿಸಿ ಸುಮ್ಮನೆ ಕುಳಿತುಬಿಟ್ಟನು.

ದೋಣಿಗಳು ಮೆಲ್ಲಮೆಲ್ಲಗೆ ತೀರದ ಕಡೆಗೆ ಬಂದುವು. ಕಳ್ಳರು ಕದ್ದು ತಂದಿದ್ದ ದ್ರವ್ಯವನ್ನು ಒಂದು ಕಡೆ ಭೂಮಿಯಲ್ಲಿ ಹುಗಿದಿಟ್ಟು, ಮುಂದಕ್ಕೆ ತೆರಳಿದರು. ಆಗಲೂ ನರೇಂದ್ರನ ಕಣ್ಣುಗಳು ಕಟ್ಟಲ್ಪಟ್ಟಿದ್ದುವು.

ದೋಣಿಗಳೆಲ್ಲವೂ ಕೊಂಚ ಹೊತ್ತಿನಲ್ಲಿಯೇ ಒಂದು ವನದ ಸಮೀಪದಲ್ಲಿ ನಿಂತವು. ಹಡಗಿನಲ್ಲಿದ್ದವರೆಲ್ಲರೂ ಒಬ್ಬೊಬ್ಬರಾಗಿ ಇಳಿದು ನರೇಂದ್ರನನ್ನು ಶವದಂತೆ ಹೆಗಲ ಮೇಲೆ ಹೊತ್ತುಕೊಂಡು ವನದ ಮಧ್ಯವನ್ನು ಪ್ರವೇಶಮಾಡಿದರು. ಜನರ ಕಾಲುಗಳಿಂದ ದಳಿತವಾದ ಶುಷ್ಕಪತ್ರಗಳು ಸರಸರಶಬ್ದಮಾಡಿದುವು. ಒಣಗಿ ಹೋದ ಎಲೆಗಳ ಈ ಅವಸ್ಥೆಯನ್ನು ನೋಡಿ ಗಿಡದೆಲೆಗಳು ಭಯದಿಂದಲೋ ಎಂಬಂತೆ ನಡುಗಿದುವು. ಕೆಲವು ಸಣ್ಣಸಣ್ಣ ಎಲೆಗಳು ಗರ್ವದಿಂದ ಉದುರಿಹೋಗಿದ್ದ ಎಲೆಗಳನ್ನು ನೋಡಿ ನಿಮ್ಮ ದುರವಸ್ಥೆಯು ನಮಗೆ ಎಂದಿಗೂ ಬರಲಾರದು. ನಾವು ಯಾವಾಗಲೂ ಈರೀತಿಯಾಗಿಯೇ ಸುಖವಾಗಿ ಕಾಲವನ್ನು ಕಳೆಯುವೆವು ಎಂದು ಹಾಸ್ಯಮಾಡಿದುವು. ಜಗತ್ತಿನ ವ್ಯಾಪಾರವೇ ಹೀಗೆ. ಜನರು ಮೋಹಪಾಶದಲ್ಲಿ ಬಿದ್ದು ಇತರರ ದುರವಸ್ಥೆಯನ್ನು ನೋಡುತ್ತಿದ್ದರೂ ತಮ್ಮ ಅವಸ್ಥೆಯನ್ನು ಮರೆತೇಬಿಡುವರು. ನಮಗೂ ಎಂದಾದರೊಂದು ದಿನ ಈ ಅವಸ್ಥೆಯೇ ಬರುವುದೆಂದು ಯಾರು ತಾನೇ ಜಗತ್ತನ್ನು ಸಮದೃಷ್ಟಿಯಿಂದ ನೋಡುವರು? ಯಾರು ತಾನೇ ದರಿದ್ರರಾದ ನೆರೆಹೊರೆಯವರ ಮೇಲೆ ಅತ್ಯಾಚಾರಮಾಡುವುದನ್ನು ಬಿಟ್ಟಿರುವರು? ಯಾರು ತಾನೇ ಮೋಹಾಂಧಕಾರವನ್ನುಳಿದು ಮೋಕ್ಷಾಪೇಕ್ಷಿಗಳಾಗಿ ಧರ್ಮದಲ್ಲಿ ದೃಷ್ಟಿಯಿಟ್ಟಿರುವರು?

ಕಳ್ಳರು ನರೇಂದ್ರನನ್ನು ಹೊತ್ತುಕೊಂಡು ಆ ಅರಣ್ಯಮಧ್ಯದಲ್ಲಿದ್ದ ಒಂದು ದೊಡ್ಡದಾದ ಗುಪ್ತಗೃಹವನ್ನು ಪ್ರವೇಶಮಾಡಿದರು. ಆ ಗೃಹದ ಸುತ್ತಲೂ ಒಂದು ದೊಡ್ಡದಾದ ಪೌಳಿಗೋಡೆ. ವಾಹಕರು ನರೇಂದ್ರನನ್ನು ಮನೆಯೊಳಗೆ ಕರೆದುಕೊಂಡು ಹೋಗಿ ಒಂದು ಕೋಣೆಯಲ್ಲಿ ಮಲಗಿಸಿ ಬಿಟ್ಟು ಹೊರಟುಹೋದರು. ನರೇಂದ್ರನು ಸ್ವಲ್ಪಹೊತ್ತು ಹಾಗೆಯೇ ಬಿದ್ದಿದ್ದನು, ಅನಂತರ ಒಬ್ಬ ಮನುಷ್ಯನು ಬಂದು ನರೇಂದ್ರನ ಕಣ್ಣಿಗೆ ಕಟ್ಟಿದ್ದ ಬಟ್ಟೆಯನ್ನು ಬಿಚ್ಚಿ ಉಟ್ಟುಕೊಳ್ಳುವುದಕ್ಕೆ ಒಂದು ವಸ್ತ್ರವನ್ನು ಕೊಟ್ಟನು.

ಆ ಮನೆಯಲ್ಲಿದ್ದವರೆಲ್ಲರೂ ನರೇಂದ್ರನನ್ನು ಉಪಚರಿಸಲು ಉಪಕ್ರಮಿಸಿದರು. ದಿನೇ ದಿನೇ ನರೇಂದ್ರನಿಗೆ ದೇಹದಲ್ಲಿ ಶಕ್ತಿಯುಂಟಾಗುತ್ತ ಬಂದಿತು. ಅವನಿಗೆ ಶಕ್ತಿಯುಂಟಾದ ಹಾಗೆಲ್ಲಾ ಶೋಭನೆಯು ಜ್ಞಾಪಕಕ್ಕೆ

ಬರಲಾರಂಭಿಸಿದಳು "ಇಷ್ಟು ದಿವಸಕ್ಕೆ ಶೋಭನೆಗೆ ಮದುವೆಯಾಗಿರಬಹುದು. ಅವಳು ಇನ್ನು ಮೇಲೆ ಪರಸ್ತ್ರೀ. ಇಂದು ಮೊದಲು ನಾನು ಅವಳ ಸುದ್ದಿಯನ್ನೇ ಎತ್ತುವುದಿಲ್ಲ. ಎತ್ತಿದರೂ ಪ್ರಯೋಜನಕರವಾಗಿ ಕಂಡುಬರುವುದಿಲ್ಲ" ಈ ರೀತಿಯಾದ ಆಲೋಚನೆಯಿಂದಲೇ ನರೇಂದ್ರನು ದಿನೇ ದಿನೇ ಕೃಶನಾಗುತ ಬಂದನು. ಚಂದ್ರಮಾಮನ ಕಡೆಯವರಲ್ಲಿ ಯಾರಾದರೂ ನರೇಂದ್ರನನ್ನು ಕುರಿತು "ಇದೇನು ಹೀಗೆ ವ್ಯಸನಪಡುವೆ?" ಎಂದು ಕೇಳಿದರೆ ಅವರಿಗೆ ತನ್ನ ವ್ಯಸನವನ್ನು ಕಪಟವಿಲ್ಲದಂತೆ ಹೇಳಿಬಿಡುತ್ತಿದ್ದನು. ಆದರೆ ಮಾತ್ರ ರಮೇಶನ ಹೆಸರನ್ನಾಗಲಿ ಅವನ ಮಗಳ ಹೆಸರನ್ನಾಗಲಿ ಒಂದು ದಿನವೂ ಎತ್ತಿದವನಲ್ಲ. ನರೇಂದ್ರನ ದುಃಖವನ್ನು ವಿಚಾರಿಸಿದವರಲ್ಲಿ ಕೆಲವರು ಬಲು ವ್ಯಸನಪಟ್ಟರು. ಮತ್ತೆ ಕೆಲವರು ಹಾಸ್ಯಮಾಡಲಾರಂಭಿಸಿದರು. ಮತ್ತೆ ಕೆಲವರು "ನಮ್ಮ ಜತೆಯಲ್ಲಿ ಬರುವುದಾದರೆ ನಿನಗೆ ಮನವೊಪ್ಪಿದ ಸುಂದರಿಯೊಬ್ಬಳನ್ನು ಮದುವೆಮಾಡಿಸಿಕೊಡುವೆವು. ಅನಂತರ ನೀನು ಸುಖವಾಗಿರಬಹುದು" ಎಂದು ಹೇಳಿದರು.

ನರೇಂದ್ರನಿಗೂ, ಚಂದ್ರಮಾಮನ ಕಡೆಯವರಿಗೂ ಈ ವಿಷಯದಲ್ಲಿಯೇ ವಿಧವಿಧವಾಗಿ ಮಾತುಕತೆಗಳು ನಡೆದುವು. ಇಷ್ಟಾದರೂ ನರೇಂದ್ರನು ತಾನು ಆರೆಂಬುದನ್ನು ತಿಳಿಸಲಿಲ್ಲ. ಪರಿಚಯವನ್ನು ಕೊಡದೆ ಇರುವುದಕ್ಕೂ ಕಾರಣವಿದ್ದಿತು. ನಿಜವಾಗಿಯೂ ನರೇಂದ್ರನನ್ನು ಪ್ರೀತಿಸುತಿದ್ದವರು ಅವನ ಪರಿಚಯವನ್ನು ಕೊಡಕೂಡದೆಂತಲೂ ಹಾಗೆ ಕೊಡುವುದಾದರೆ ಮುಂದೆ ಪ್ರಾಣಭಯ ಸಂಭವಿಸಬಹುದೆಂತಲೂ ನರೇಂದ್ರನಿಗೆ ತಿಳಿಯಹೇಳಿದರು. ಲೋಕದಲ್ಲಿ ಎಲ್ಲಾ ಭಯಕ್ಕಿಂತಲೂ ಪ್ರಾಣಭಯವೊಂದೇ ದೊಡ್ಡದು. ನರೇಂದ್ರನಿಗೆ ಬದುಕಬೇಕೆಂಬ ಆಶೆಯು ಅಷ್ಟು ಇಲ್ಲದಿದ್ದರೂ, ಪ್ರಾಣಬಿಡುವುದರಲ್ಲಿ ಅವನಿಗೆ ಇಷ್ಟವಿರಲಿಲ್ಲ. ಅವನ ಮನಸ್ಸಿನಲ್ಲಿ ಒಂದು ಆಲೋಚನೆಯು ಹುಟ್ಟಿತು. ಅದೇನೆಂದರೆ—"ಈಗಲೇ ಸಾಯುವುದಾದರೆ ಶೋಭನೆಯನ್ನು ನೋಡುವ ಆಶೆಯು ಇರುವುದಿಲ್ಲ. ದೂರದಿಂದಲಾದರೂ ಒಂದಾವೃತ್ತಿ ಶೋಭನೆಯನ್ನು ನೋಡಿ ಪ್ರಾಣಬಿಡಬೇಕು" ಇದರಿಂದಲೇ ನರೇಂದ್ರನಿಗೆ ಸಾಯುವುದಕ್ಕೆ ಇಷ್ಟವುಂಟಾಗಲಿಲ್ಲ. ಸಾಯುವುದೆಂದರೆ ಅವನಿಗೆ ಭಯವಾಗುತ್ತಿತ್ತು. ಅದಕ್ಕಾಗಿಯೇ ಅವನು ಎಲ್ಲಾ ಕ್ಲೇಶವನ್ನೂ ಸಹಿಸುತಿದ್ದನು. ನರೇಂದ್ರನ ದುಃಖವನ್ನು ನೋಡಿ ದಯಾಳುಗಳಾದ ಕೆಲವು ಕಳ್ಳರು ಇವನನ್ನು ಸಂತೈಸುವರು. ಕೆಲವರು ದುಃಖೋಪಶಮನಾರ್ಥವಾಗಿ ಕಥೆಗಳನ್ನು ಹೇಳುವರು. ಮತ್ತೆ ಕೆಲವರು ಅವನಿಗೆ ಬೇಕಾದ ವಸ್ತುವನ್ನು ತಂದುಕೊಡುವುದಾಗಿಯೂ ಹೇಳತೊಡಗಿದರು. ಇವರ ಇಷ್ಟು ಒಳ್ಳೆಯ ಮಾತುಗಳೆಲ್ಲವೂ ನರೇಂದ್ರನಿಗೆ ಮತ್ತಷ್ಟು ವ್ಯಸನ

ವನ್ನು ಹೆಚ್ಚುಮಾಡುತಲಿದ್ದವು. ಇದೇ ರೀತಿಯಲ್ಲಿಯೇ ನರೇಂದ್ರನು ದಿನಗಳನ್ನು ಕಳೆಯಲಾರಂಭಿಸಿದನು.

---

## ಇಪ್ಪತ್ತನಾಲ್ಕನೆಯ ಪರಿಚ್ಛೇದ

ಇಂದು ಪೂರ್ಣಿಮಾ ; ಆಕಾಶದಲ್ಲಿ ಪೂರ್ಣಚಂದ್ರನು ಪ್ರಕಾಶಿಸುತ್ತಲಿರುವನು. ಪೃಥಿವಿಯಲ್ಲಿರುವ ಪದಾರ್ಥಗಳೆಲ್ಲವೂ ಚಂದ್ರಕಿರಣಗಳಿಂದ ಅಪೂರ್ವ ಶೋಭಾರಾಶಿಯನ್ನು ಧಾರಣಮಾಡಿದ್ದುವು. ಚಂದ್ರಮಾಮನ ಸೇವಕರೆಲ್ಲರೂ ನೂತನವಸ್ತ್ರಗಳನ್ನು ಧಾರಣಮಾಡಿ ತಂತಮ್ಮ ಕೆಲಸಗಳಲ್ಲಿ ಆಸಕ್ತರಾಗಿರುವರು. ದರಬಾರ್ ಮಂಡಪವು ವಿಶೇಷವಾಗಿ ಅಲಂಕರಿಸಲ್ಪಡದಿದ್ದರೂ ಸುಸಜ್ಜಿತವಾಗಿದ್ದಿತು. ಮಂಡಪದ ಮಧ್ಯದಲ್ಲಿ ಒಂದು ದೊಡ್ಡದಾದ ವೇದಿಕೆ. ಅದರ ಮೇಲೆ ಮಖಮಲ್ ಹಾಸಿದ್ದಿತು. ಅದರ ಮೇಲೆ ದಳಪತಿಯು ಕುಳಿತುಕೊಳ್ಳುವುದಕ್ಕೆ ಒಂದು ಉಚ್ಚವಾದ ಆಸನವಿದ್ದಿತು. ಅದರ ಉಭಯಪಾರ್ಶ್ವದಲ್ಲಿಯೂ ದೀಪಸ್ತಂಭಗಳು ಇಡಲ್ಪಟ್ಟಿದ್ದುವು. ಉಚ್ಚಾಸನದ ಉಭಯಪಾರ್ಶ್ವಗಳಲ್ಲಿಯೂ ಜನಗಳು ಕುಳಿತುಕೊಳ್ಳುವುದಕ್ಕೋಸ್ಕರ ಯೋಗ್ಯತಾನುಸಾರವಾಗಿ ಆಸನಗಳು ಏರ್ಪಟ್ಟಿದ್ದುವು. ಸಭಾಮಂದಿರವು ವಿಶೇಷವಾದ ದೀಪಮಾಲೆಗಳಿಂದ ಅಲಂಕರಿಸಲ್ಪಟ್ಟಿದ್ದಿತು.

ಸ್ವಲ್ಪಕಾಲದಲ್ಲಿಯೇ ಆ ವನವೆಲ್ಲವೂ ಜನಗಳಿಂದ ಪೂರ್ಣವಾಗಿ ಹೋಯಿತು. ವಾದ್ಯವಿಶೇಷಗಳು ಪ್ರಾರಂಭವಾದುವು. ಜನಗಳೆಲ್ಲರೂ ಬಂದು ತಮ್ಮ ತಮ್ಮ ಸ್ಥಳದಲ್ಲಿ ನಿಂತುಕೊಂಡರು. ಎಲ್ಲರ ತಲೆಯಲ್ಲಿಯೂ ಉಷ್ಣೀಷಗಳಿದ್ದುವು. ಎಲ್ಲರೂ ಕಾವೀರಂಗಿನ ವಸ್ತ್ರವನ್ನು ಧಾರಣಮಾಡಿದ್ದರು. ಎಲ್ಲರ ಕೌಂಕುಳಲ್ಲಿಯೂ ಒಂದು ದೊಡ್ಡದಾದ ದೊಣ್ಣೆ.

ಜನಗಳೆಲ್ಲರೂ ಬಂದನಂತರದಲ್ಲಿ ಚಂದ್ರಮಾಮನು ಬಂದನು. ಜನರ ಗದ್ದಲವೆಲ್ಲವೂ ಏಕಕಾಲದಲ್ಲಿಯೇ ನಿಂತುಹೋಯಿತು. ಚಂದ್ರಮಾಮನು ಉಚ್ಚಾಸನದ ಹತ್ತಿರ ಬಂದೊಡನೆಯೇ ಎಲ್ಲರೂ ಮರ್ಯಾದೆಯನ್ನು ಮಾಡಿದರು. ಚಂದ್ರಮಾಮನು ನಿರ್ದಿಷ್ಟವಾದ ಆಸನದಲ್ಲಿ ಕುಳಿತನು. ಈ ದಿನ ಚಂದ್ರಮಾಮನು ಪಶ್ಚಿಮದೇಶದ ರಾಜನಂತೆ ವೇಷವನ್ನು ಧಾರಣಮಾಡಿದ್ದನು. ಅವನ ತಲೆಯಲ್ಲಿ ಅಮೂಲ್ಯ ರತ್ನಾಭರಣಗಳಿಂದ ಕೂಡಿದ ಉಷ್ಣೀಷ. ಉಷ್ಣೀಷದ ಮೇಲೆ ನವರತ್ನಖಚಿತವಾದ ತುರಾಯಿ. ಚಂದ್ರಮಾಮನು ಶುಭ್ರವಾಗಿದ್ದ ಕವಚವೊಂದನ್ನು ತೊಟ್ಟಿದ್ದನು. ಕಂಠದಲ್ಲಿ ಮುತ್ತಿನ ಸರ. ಈ ದಿನ ಈ ರೀತಿ

ಯಾದ ವೇಷವನ್ನು ಏತಕ್ಕೆ ಧಾರಣಮಾಡಿದನೆಂಬುದನ್ನು ವಿಚಾರಿಸುವುದು ನಮ್ಮ ಕರ್ತವ್ಯವಲ್ಲ. ಆವನು ಲೋಕದ ಹಿತಸಾಧನೆಯಲ್ಲಿ ಬದ್ಧಕಂಕಣನೋ, ಇತರರ ದುಃಖವನ್ನು ದೂರ ಮಾಡುವುದೇ ಆವನ ಜೀವನದ ಪರಮೋದ್ದೇಶವೊ, ದರಿದ್ರರನ್ನು ರಕ್ಷಿಸುವುದೇ ಆವನ ಕೆಲಸವೊ, ಅಂತಹವನು ಈದಿನ ಈ ವೇಷ ವನ್ನು ಧಾರಣಮಾಡಿದ್ದುದನ್ನು ನೋಡಿ ಅಧಿಕಾರಿಗಳು ಸ್ವಲ್ಪ ವಿಸ್ಮಿತರಾದರು.

ಚಂದ್ರಮಾಮನು ಆಸನದ ಮೇಲೆ ಕುಳಿತೊಡನೆಯೇ ಇಬ್ಬರು ಅವನ ಅಕ್ಕಪಕ್ಕಗಳಲ್ಲಿ ನಿಂತು ಬೀಸುತ್ತಿದ್ದರು. ಅವನ ಅಪ್ಪಣೆಯನ್ನು ನೆರವೇರಿಸು ವುದಕ್ಕೋಸ್ಕರ ಭೃತ್ಯರು ಹಿಂದುಗಡೆಯೂ ನಿಂತಿದ್ದರು.

ಚಂದ್ರಮಾಮನು ಕುಳಿತೊಡನೆ ಎಲ್ಲರೂ ಕುಳಿತುಕೊಂಡರು. ಎಲ್ಲರೂ ಕುಳಿತಮೇಲೆ ಆ ರಾತ್ರಿಯ ಕಾರ್ಯವು ಪ್ರಾರಂಭವಾಯಿತು. ಮೊದಲು ಚಂದ್ರ ಮಾಮನು ಸನ್ಯಾಸಿನಿಯನ್ನು ತನ್ನ ಸಮೀಪಕ್ಕೆ ಬರುವಂತೆ ಅಪ್ಪಣೆಮಾಡಿದನು. ಸನ್ಯಾಸಿನಿಯು ಬಂದು ಪ್ರಣಾಮ ಮಾಡಿ ಹತ್ತಿರ ನಿಂತುಕೊಂಡಳು. ಚಂದ್ರ ಮಾಮನು ಸನ್ಯಾಸಿನಿಯನ್ನು ಕುರಿತು ಹೇಳಲಾರಂಭಿಸಿದನು. "ನಿನ್ನ ಕೆಲಸ ವನ್ನು ನೋಡಿ ನಾನು ನಿಜವಾಗಿಯೂ ಸಂತುಷ್ಟನಾದೆನು. ಶತ್ರುವೇ ಆಗಲಿ ಮಿತ್ರನೇ ಆಗಲಿ, ವಿಪತ್ತಿನಲ್ಲಿ ಬಿದ್ದವನನ್ನು ರಕ್ಷಣೆಮಾಡುವುದೇ ಪರಮಧರ್ಮವು. ನೀನು ಆ ಧರ್ಮವನ್ನು ಚೆನ್ನಾಗಿಯೇ ಕಾಪಾಡಿರುವೆ. ಆ ಸಮಯದಲ್ಲಿ ನೀಚ ನಾದ ಉಪೇಂದ್ರನಾರಾಯಣನಿಂದ ಅವನ ತಂದೆಯ ಔರ್ಧ್ವದೈಹಿಕಕಾರ್ಯವು ನೆರವೇರುವ ಸಂಭವವಿರಲಿಲ್ಲ. ನೀನು ಆಗ ಉಪೇಂದ್ರನಿಗೆ ಮಹತ್ತಾದ ಉಪ ಕಾರವನ್ನು ಮಾಡಿದೆ. ಆದರೆ ಅವನು ಮಾತ್ರ ನಿನ್ನ ವಿಷಯದಲ್ಲಿ ಶತ್ರುತ್ವವನ್ನೇ ಸಾಧಿಸುತ್ತಿರುವನು. ಅವನು ಯಾವಾಗಲೂ ನಿನ್ನನ್ನು ಬಲೆಯಲ್ಲಿ ಹಾಕಿ ಕೊಳ್ಳುವುದಕ್ಕೇ ಸಮಯವನ್ನು ನಿರೀಕ್ಷಿಸುತ್ತಿರುವನು. ಪಾಪಿಯಾದ ಉಪೇಂ ದ್ರನಿಗೆ ದುಷ್ಕಾರ್ಯದಲ್ಲಿ ರಾಧಾನಾಥನು ಪರಮಸಹಾಯನು. ಅವನು ನಿನ್ನನ್ನು ಹುಡುಕುತ್ತಿರುವನು. ನೀನು ನಮ್ಮ ಆಶ್ರಯದಲ್ಲಿರುವುದು ಅವನಿಗೆ ಗೊತ್ತೇ ಇಲ್ಲ. ಅವನಿಗೆ ಗೊತ್ತಾದಲ್ಲಿ ನಿನ್ನ ಒಳ್ಳೆಯ ಉದ್ದೇಶಗಳಿಗೆ ಭಂಗವುಂಟಾಗು ವುದರಲ್ಲಿ ಸಂಶಯವಿರಲಾರದು."

ಈ ಮಾತನ್ನು ಕೇಳಿ ಸನ್ಯಾಸಿನಿಯು ಹೇಳತೊಡಗಿದಳು. "ತಂದೆಯೆ! ಕ್ಷಮಿಸಬೇಕು. ಆರಿಂದಲೂ ನನಗೆ ಆವ ವಿಧವಾದ ವಿಘ್ನವೂ ಉಂಟಾಗಲಾರದು. ಆವನು ನನ್ನನ್ನು ಮೋಸಗೊಳಿಸಿ ನನ್ನ ಪಾತಿವ್ರತ್ಯವೆಂಬ ಅನರ್ಘವಾದ ರತ್ನ ವನ್ನಪಹರಿಸಲೆಳಸಿದನೋ, ಆವನು ನಂಬಿದ್ದವರಲ್ಲಿಯೇ ಅತ್ಯಾಚಾರಮಾಡ ತೊಡಗಿದನೋ, ಆವನು ಕೇವಲ ಆತ್ಮಸುಖಕ್ಕೋಸ್ಕರವಾಗಿಯೇ ಇತರರ ಸರ್ವ

ವುಂಟಾಯಿತು. ಶೋಭನೆಯು ಒಂದಾವೃತ್ತಿ ಸುತ್ತಲೂ ನೋಡಿದಳು. ಅನಂತರ ಚತುರೆಯನ್ನು ನೋಡಿ "ನಾನು ಎಲ್ಲಿರುವೆನು? ನಾನು ಇಲ್ಲಿಗೆ ಹೇಗೆ ಬಂದೆನು?" ಎಂದಳು. ಅದಕ್ಕೆ ಚತುರೆಯು ಉತ್ತರ ಕೊಟ್ಟುದನ್ನು ನೋಡಿ ಶೋಭನೆಯ ಬಾಯಿಯು ಒಣಗಿಹೋಯಿತು. ಚತುರೆಯು ಶೈತ್ಯೋಪಚಾರವನ್ನು ಮಾಡತೊಡಗಿದಳು. ಇದರಿಂದ ಶೋಭನೆಗೆ ಮತ್ತೆ ಚೈತನ್ಯಬಂದಿತು. ಆಮೇಲೆ ಚತುರೆಯು ಕುಡಿಯುವುದಕ್ಕೆ ನೀರನ್ನು ಕೊಟ್ಟಳು. ಶೋಭನೆಯು ನೀರನ್ನು ಕುಡಿದಳು.

ಶೋಭನೆಯು ಸ್ವಲ್ಪ ಚೇತರಿಸಿಕೊಂಡು "ನೀನಾರು?" ಎಂದಳು.

ಚತುರೆ—ನಿಮ್ಮ ತಾಯಿಯು ನಿನ್ನೊಡನೆ ನನ್ನನ್ನು ಕಳುಹಿಸಿರುವಳು. ಅವರೆಲ್ಲರೂ ಬರುವುದಕ್ಕೆ ಸ್ವಲ್ಪ ಹೊತ್ತಾಗಬಹುದು. ಅವರು ಇಲ್ಲಿಗೆ ಬರುವವರೆಗೂ ನಿನ್ನನ್ನು ನೋಡಿಕೊಂಡಿರುವಂತೆ ಹೇಳಿರುವರು.

ಶೋಭನೆ—ಈಗ ನಾನು ಎಲ್ಲಿರುವೆನು? ಈ ಮನೆಯು ನಮ್ಮದಾಗಿ ಕಾಣಿಸುವುದಿಲ್ಲ. ಯಾರ ಮನೆಗೋ ಹೋಗುವುದಕ್ಕೆ ನನ್ನೊಡನೆ ನಿನ್ನನ್ನು ಕಳುಹಿಸಿರುವಳೇ?

ಚತುರೆ—ಇದು ಉಪೇಂದ್ರನಾರಾಯಣನ ಮನೆ.

ಶೋಭನೆಯು ಉಪೇಂದ್ರನ ಹೆಸರನ್ನು ಕೇಳಿದೊಡನೆಯೇ ತನ್ನ ಎರಡು ಕಿವಿಗಳನ್ನು ಮುಚ್ಚಿಕೊಂಡಳು. ಉಪೇಂದ್ರನ ಹೆಸರನ್ನು ಕೇಳಿದಳೋ ಇಲ್ಲವೋ ಅವಳಿಗೆ ಹಿಂದಿನ ಚರಿತ್ರೆಯೆಲ್ಲವೂ ಜ್ಞಾಪಕಕ್ಕೆ ಬಂದಿತು. ಶೋಭನೆಯು ಮತ್ತೆ ಕೇಳಿದಳು, "ನನ್ನನ್ನು ಇಲ್ಲಿಗೆ ಕಳುಹಿಸುವುದರಲ್ಲಿ ಅವರಿಗೆ ಉದ್ದೇಶವೇನು?"

ಚತುರೆಯು ಸ್ವಲ್ಪ ನಕ್ಕಳು. ಆ ನಗುವನ್ನು ನೋಡಿ ಶೋಭನೆಯ ಮೈಯೆಲ್ಲ ನಡುಗಿತು. ಚತುರೆಯು ಮತ್ತೆ ಮಾತನಾಡಿದಳು. "ಶೋಭನೆ! ನಿನ್ನನ್ನು ನರೇಂದ್ರನಿಗೆ ಕೊಟ್ಟು ವಿವಾಹವಾಗಬೇಕೆಂದು ನಿಶ್ಚಯವಾಗಿತ್ತಲ್ಲವೆ? ಆ ನರೇಂದ್ರನು ವಿಶಾಲಾಕ್ಷಿಯಲ್ಲಿ ಮುಳುಗಿಹೋದ ಸಂಗತಿಯನ್ನು ನಿಮ್ಮ ತಾಯಿಯು ಕೇಳಿ ನಿನ್ನನ್ನು ಉಪೇಂದ್ರನಾರಾಯಣನಿಗೆ ಕೊಟ್ಟು ಮದುವೆ ಮಾಡುವುದಕ್ಕಾಗಿ ಇಲ್ಲಿಗೆ ಕಳುಹಿಸಿಕೊಟ್ಟಿರುವಳು. ಅವಳು ಇಲ್ಲಿಗೆ ಬಂದಳೆಂದರೆ ನಿನ್ನ ಮದುವೆಯು ನಡೆದುಹೋಗುವುದು."

ಸಾವಿರಾರು ವೃಶ್ಚಿಕಗಳು ಏಕಕಾಲದಲ್ಲಿಯೇ ಕಚ್ಚುವುದಾದರೆ ಎಂತಹ ಯಾತನೆಯುಂಟಾಗುವುದೋ, ಶೋಭನೆಗೆ ಆ ಮಾತನ್ನು ಕೇಳಿದೊಡನೆಯೇ ಅಂತಹ ಯಾತನೆಯುಂಟಾಯಿತು. ಅವಳ ಕಣ್ಣುತುಂಬಾ ನೀರು ತುಂಬಿ ಕೊಂಡಿತು. ಇದನ್ನು ನೋಡಿ ಚತುರೆಯು ಮತ್ತೆ ನಕ್ಕು ಮಾತನಾಡತೊಡ ಗಿದಳು. "ಮದುವೆಯೆಂದರೆ ನಿನ್ನ ಹಾಗೆ ಅಳುವವಳನ್ನು ನಾನೆಲ್ಲಿಯೂ ಕಾಣೆನು. ಉಪೇಂದ್ರನು ಯುವಾ ಅಲ್ಲದೆ ದೊಡ್ಡ ಜಮೀ಼ನ್ದಾರ; ವಿಪುಲ ವಾದ ಸಂಪತ್ತಿಗೆ ಅಧಿಕಾರಿ. ಇಂತಹವನನ್ನು ಮದುವೆಯಾದರೆ ನಿನಗೆ ಉಂಟಾಗತಕ್ಕ ಸುಖವು ಮುಂದೆ ತಾನಾಗಿಯೇ ಗೊತ್ತಾದೀತು. ಇದಾವು ದನ್ನೂ ತಿಳಿಯದೇ ನಿನ್ನ ತಾಯಿತಂದೆಗಳು ಸುಮ್ಮನೇ ಇಲ್ಲಿಗೆ ಕಳುಹಿಸಿ ಕೊಟ್ಟಿರುವರೆ? ಅದು ಹೋಗಲಿ. ಮುಂದಕ್ಕೆ ಹೇಗಾಗಬೇಕೊ ಹಾಗೆಯೇ ಆಗುವುದು. ಸಧ್ಯಕ್ಕೆ ಸ್ವಲ್ಪ ಆಹಾರವನ್ನು ತೆಗದುಕೋ. ನಿನಗೆ ಈ ಮದುವೆ ಯಲ್ಲಿ ಇಷ್ಟವಿಲ್ಲದೇಹೋದರೆ ನಿಮ್ಮ ತಾಯಿತಂದೆಗಳು ಇಲ್ಲಿಗೆ ಬಂದೊಡನೆ ಹೊರಟುಹೋಗು. ಯಾರು ಬೇಡವೆನ್ನುವರು. ನನಗಾದರೊ ನೀನು ಈ ವಿವಾಹಕ್ಕೆ ಒಪ್ಪುವುದಾದರೆ ನೀನು ಭಾಗ್ಯವತಿಯಾಗುವುದೇನೋ ನಿಜವೆಂದು ನಂಬುಗೆಯುಂಟು."

ಚತುರೆಯ ಮಧುರವಾದ ಮಾತುಗಳು ಶೋಭನೆಯ ಕಿವಿಯಲ್ಲಿ ವಿಷ ವರ್ಷಣವನ್ನು ಮಾಡಿದುವು. ಶೋಭನೆಯು ಅದಕ್ಕೆ ಏನೊಂದು ಉತ್ತರವನ್ನೂ ಕೊಡಲಿಲ್ಲ, ಊಟವನ್ನೂ ಮಾಡಲಿಲ್ಲ. ಕ್ರಮವಾಗಿ ರಾತ್ರಿ ಕಳೆದು ಬೆಳ ಗಾಯಿತು. ಪಾಠಕರೆ! ಚತುರೆಯನ್ನು ಬೆಳಕಿನಲ್ಲಿ ನೋಡಿರಿ. ಅವಳು ನಮಗೆ ಪೂರ್ವ ಪರಿಚಿತೆಯಾದ ಗೊಲ್ಲರ ಹೆಂಗುಸು. ಇವಳೇ ಇಂದಿರೆಯ ಪಾತಿವ್ರತ್ಯ ವನ್ನು ಹೋಗಲಾಡಿಸಲು ಮಹಾಪ್ರಯತ್ನವನ್ನು ಮಾಡಿದವಳು. ಇಂದಿರೆಯಾ ಯಿತು. ಶೋಭನೆಯನ್ನು ಮೋಸಪಡಿಸಲು ಈಗ ಸನ್ನದ್ಧಳಾಗಿರುವಳು.

---

## ಇಪ್ಪತ್ತಾರನೆಯ ಪರಿಚ್ಛೇದ

ಈ ದಿನ ಉದ್ಯಾನವನದಲ್ಲಿ ಒಂದು ಮಹೋತ್ಸವ. ರಾಧಾನಾಥನು ಈದಿನ ಬಹಳ ಸಂತೋಷದಿಂದಿರುವನು. ರಾಮದಾಸನು ರಾಧಾನಾಥನ ಇಷ್ಟಾ ನುಸಾರವಾಗಿ ಶೋಭನೆಯನ್ನು ಅವಳ ತೌರುಮನೆಯಿಂದ ಹೊತ್ತುಕೊಂಡು ಬಂದು ಬೇರೊಂದು ಸ್ಥಳದಲ್ಲಿ ನಿರ್ಬಂಧಿಸಿರುವನು. ಈದಿನ ಉಪೇಂದ್ರನ ಮನೋರಥವು ಸಂಪೂರ್ಣವಾಗಿ ನೆರವೇರುವುದೆಂದು ರಾಧಾನಾಥನು ಪರಮಾ

ನಂದಭರಿತನಾದನು. ಆದುದರಿಂದ ಅವನು ಬೆಳಗಿನಿಂದಲೂ ಮದ್ಯವನ್ನು ಪಾನಮಾಡಲು ಉಪಕ್ರಮಿಸಿದನು. ಎಲ್ಲರ ಬಾಯಿಯಲ್ಲಿಯೂ ಸಂಭ್ರಮದ ಮಾತುಗಳು. ಸಂತೋಷವಾದರೋ ತನ್ಮಯವಾಗಿ ಹೋಗಿತ್ತು.

ಸೂರ್ಯನು ಕ್ರಮವಾಗಿ ಯೌವನಾವಸ್ಥೆಯನ್ನು ತಾಳಿದನು. ಅವನ ಕಿರಣಗಳಿಂದ ಧರೆಯು ತಪಿಸಿಹೋಗುತ್ತಿತ್ತು. ಉಪೇಂದ್ರನು ಆಗ ತಾನೆ ನಿದ್ರೆಯಿಂದ ಎಚ್ಚತ್ತನು. ಎದ್ದವನು ಉದ್ಯಾನದ ಕಡೆ ತಿರುಗಿದನು. ರಾಧಾನಾಥನು ಉಪೇಂದ್ರನನ್ನು ನೋಡಿ ಗಂಭೀರಭಾವದಿಂದ ತನ್ನ ಯುಕ್ತಿಯನ್ನೂ ರಾಮದಾಸನ ಭಕ್ತಿಯನ್ನೂ ಆದ್ಯೋಪಾಂತವಾಗಿ ವಿವರಿಸಿದನು. ಉಪೇಂದ್ರನು ಬಲು ಸಂತೋಷಪಟ್ಟು ಮದ್ಯಸೇವನೆಗೆ ಉದ್ಯುಕ್ತನಾದನು.

ಕಾರ್ಯಸಿದ್ಧಿಯಾಯಿತೆಂದು ಉಪೇಂದ್ರನ ಸಂತೋಷಕ್ಕೆ ಪಾರವೇ ಇರಲಿಲ್ಲ. ಆದರೆ ಶೋಭನೆಯನ್ನು ಒಂದು ಸಲ ಕಣ್ಣಿನಿಂದ ನೋಡಿಬಿಡಬೇಕೆಂದು ಉಪೇಂದ್ರನು ತನ್ನ ಅಭಿಪ್ರಾಯವನ್ನು ತೋರ್ಪಡಿಸಿದನು. ರಾಧಾನಾಥನು ಇದಕ್ಕೆ ಆಸ್ಪದ ಕೊಡಲಿಲ್ಲ. ಅವನು ಉಪೇಂದ್ರನ ಮನಸ್ಸನ್ನು ಬದಲಾಯಿಸುವುದಕ್ಕೋಸ್ಕರ ವಿಧವಿಧವಾಗಿ ಮಾತನಾಡುವನು. ಏನು ಮಾಡಿದರೂ ಆ ಆಶೆ ಬೇರೆ ಉಪೇಂದ್ರನನ್ನು ಬಿಟ್ಟು ತೊಲಗಲಿಲ್ಲ. ಉಪೇಂದ್ರನು ರಾಧಾನಾಥನನ್ನು ಕುರಿತು, "ಮಿತ್ರನೆ! ಒಂದಾವೃತ್ತಿ ಅಲ್ಲಿಗೆ ಹೋಗಲು ಆಸ್ಪದ ಕೊಡು, ಅನಂತರ ನಾನು ಮತ್ತೆ ಅಲ್ಲಿಗೆ ಹೋಗುವುದಿಲ್ಲ." ಎಂದನು. ರಾಧಾನಾಥನಿಗೆ ಇದು ಇಷ್ಟವಾಗಲಿಲ್ಲ. ಕೊನೆಗೆ ಉಪೇಂದ್ರನು ಈ ಅಭಿಪ್ರಾಯವನ್ನೇ ಬಿಟ್ಟುಬಿಡಬೇಕಾಗಿ ಬಂದಿತು. ಮನಸ್ಸಿನ ಆವೇಗವನ್ನು ಕಡಮೆ ಮಾಡುವುದಕ್ಕೋಸ್ಕರ ಉಪೇಂದ್ರನು ರಾಮದಾಸನನ್ನು ಹತ್ತಿರಕ್ಕೆ ಬರಹೇಳಿದನು. ರಾಮದಾಸನು ಶೋಭನೆಯನ್ನು ಅಪಹರಿಸಲು ತಾನು ಮಾಡಿದ ಕೆಲಸವೆಲ್ಲವನ್ನೂ ಒಂದೂ ಬಿಡದೆ ಹೇಳತೊಡಗಿದನು. ಉಪೇಂದ್ರನು ಅತ್ಯಾದರದಿಂದ ಕೇಳಲಾರಂಭಿಸಿದನು.

ಶೋಭನೆಯ ಮನಸ್ಸನ್ನು ಸಂಪೂರ್ಣವಾಗಿ ಹಿಂತಿರುಗಿಸುವ ಪರ್ಯಂತವೂ ಉಪೇಂದ್ರನು ಅವಳ ಕಣ್ಣಿಗೆ ಬೀಳದಿರುವುದು ಒಳ್ಳೆಯದು, ಎಂದು ಚತುರೆಯಾದ ಗೋಪಕನ್ಯೆಯು ರಾಧಾನಾಥನಿಗೆ ತಿಳಿಸಿದ್ದಳು. ಆದಕ್ಕಾಗಿಯೇ ರಾಧಾನಾಥನು ಉಪೇಂದ್ರನನ್ನು ಅಲ್ಲಿಗೆ ಹೋಗದಂತೆ ತಡೆದು ಇಟ್ಟುಕೊಂಡಿದ್ದನು. ಇವಳ ಅಂತರ್ಯವನ್ನು ಉಪೇಂದ್ರನಿಗೆ ತಿಳಿಸದೇ ಕಾರಣಾಂತರದಿಂದ ರಾಧಾನಾಥನು ಅಡ್ಡಗಿಸುತ್ತಿದ್ದನು. ಇದರ ಕಾರಣವನ್ನು ತಿಳಿಯುವುದು ಉಪೇಂದ್ರನಿಗೆ ಆವಶ್ಯಕವಾಗಿರಲಿಲ್ಲ. ಅವನಿಗೆ ಮುಖ್ಯವಾಗಿ ಶೋಭನೆಯು

ಬೇಕಾಗಿದ್ದಳು. ಪಕ್ಷಿಯಾದರೋ ಪಂಜರದಲ್ಲಿ ಸಿಕ್ಕಿಬಿದ್ದಿರುವುದು. ಈ ಹೊತ್ತಾಗಲಿ ನಾಳೆಯಾಗಲಿ ಎಂದಾದರೊಂದು ದಿನ ತನ್ನ ಕೈವಶವಾಗದೇ ಇರಲಾರದೆಂದು ತಿಳಿದು, ಉಪೇಂದ್ರನು ಮನಸ್ಸಿಗೆ ಸಮಾಧಾನವನ್ನು ತಂದುಕೊಂಡನು. ಚತುರೆಯು ಈ ಕಾರ್ಯವನ್ನು ಕೈಕೊಂಡಿರುವಾಗ ಯಾವುದೂ ಅಸಾಧ್ಯವಾಗಲಾರದೆಂದು ಉಪೇಂದ್ರನಿಗೆ ನಂಬುಗೆಯಿದ್ದಿತು. ಆದುದರಿಂದ ಈ ವಿಷಯದಲ್ಲಿ ರಾಧಾನಾಥನನ್ನು ಪದೇಪದೇ ಪೀಡಿಸುವುದು ಸರಿಯಲ್ಲವೆಂದು ತಿಳಿದು ಪ್ರಕೃತಕಾರ್ಯದಲ್ಲಿ ಮಗ್ನನಾಗಿಹೋದನು. ಮಾತಿನ ಸಂದರ್ಭದಲ್ಲಿ ರಾಧಾನಾಥನು ರಾಮದಾಸನನ್ನು ಕುರಿತು, "ರಾತ್ರಿಯೆಲ್ಲಾ ನಿದ್ರೆಗೆಟ್ಟು ಬಹಳ ಕಷ್ಟಪಟ್ಟಿರುವೆನು." ಎಂದನು.

ರಾಮದಾಸ—ಬಾಬುವಿನ ಕೆಲಸದಲ್ಲಿ ನಮಗೆ ಕಷ್ಟವೆಂದರೇನು ? ಆದರೆ ನಿಜವಾಗಿಯೂ ಹೇಳುವೆನು. ಈಸಲ ಪಟ್ಟ ಶ್ರಮ ನಾನು ಯಾವಾಗಲೂ ಪಟ್ಟಿರಲಿಲ್ಲ. ನಾನು ಯಾವಾಗಲೂ ಹೆದರತಕ್ಕ ಮನುಷ್ಯನಲ್ಲ. ಹಾಗಿದ್ದರೂ ಈ ಕೆಲಸವು ಗುರುತರವಾದುದರಿಂದ ನನಗೆ ಪ್ರತಿಕ್ಷಣದಲ್ಲಿಯೂ ಪ್ರಾಣಭಯವಿದ್ದೇ ಇದ್ದಿತು. ಸಮಯದಲ್ಲಿ ನಾನೆಂದಿಗೂ ಧೈರ್ಯಗೆಡತಕ್ಕವನಲ್ಲ. ಪ್ರಾಣವನ್ನಾದರೂ ತ್ಯಜಿಸಿ ಕಾರ್ಯಸಾಧನೆಯನ್ನು ಮಾಡತಕ್ಕವನೇ ಹೊರತು ನಾನು ಸುಮ್ಮನೆ ಬಿಡತಕ್ಕವನಲ್ಲ.

ಉಪೇಂದ್ರನು ರಾಮದಾಸನ ಪೌರುಷವನ್ನು ಕೇಳಿ ಬಹಳ ಸಂತೋಷಪಟ್ಟನು. ಮಾತಿನ ಮೇಲೆ ಮಾತುಗಳು ಜರುಗಿದುವು. ಎಷ್ಟು ಮಾತನಾಡಿದರೂ ಉಪೇಂದ್ರನಿಗೆ ತೃಪ್ತಿಯೆಂಬುದೇ ಕಾಣಬರಲಿಲ್ಲ. ರಾಮದಾಸನು ಉಪೇಂದ್ರನ ಪ್ರೀತಿಯನ್ನು ಸಂಪಾದಿಸುವುದಕ್ಕೆ ಇದೇ ಸಮಯವೆಂದು ನಡೆದ ಸಂಗತಿಗಳ ಜತೆಗೆ ಅದ್ಭುತವಾದ ಘಟನಾವಳಿಗಳನ್ನು ಸೇರಿಸಿ ವರ್ಣನೆ ಮಾಡಲಾರಂಭಿಸಿದನು. ಇದನ್ನು ಕೇಳಿ ಉಪೇಂದ್ರನಿಗೆ ಇನ್ನೂ ಕೇಳಬೇಕೆಂಬ ಕುತೂಹಲವು ಹೆಚ್ಚುತಲಿದ್ದಿತು. ಇದನ್ನು ತಿಳಿದು ರಾಮದಾಸನು ತನ್ನ ವಾಗ್ವೈಖರಿಯನ್ನು ವಿಜೃಂಭಿಸುತ್ತಿದ್ದನು. ಹೀಗೆಯೇ ಕೆಲವು ಕಾಲವು ಕಳೆಯಿತು. ಮಧ್ಯೇಮಧ್ಯೇ ಸುರಾಪಾತ್ರೆಯು ಎಲ್ಲರ ಮುಖವನ್ನೂ ಚುಂಬನಮಾಡುತಲಿದ್ದಿತು. ಸುರೆಯು ರಾಮದಾಸನ ಮುಖವನ್ನೂ ಅಲಂಕರಿಸಿತು. ಇಷ್ಟಕ್ಕೇ ಅವನ ತಲೆಯು ತಿರುಗಿಹೋಯಿತು. ತಾನೇ ಸರಸ್ವತಿಯ ಅವತಾರವೆಂದೂ, ತನ್ನನ್ನು ಬಿಟ್ಟರೆ ದುಷ್ಕರವಾದ ಕೆಲಸವನ್ನು ಮತ್ತಾರೂ ಮಾಡಲಾರರೆಂದು ಮುಖದಲ್ಲಿ ಒಂದು ವಿಧವಾದ ಭಂಗಿಯನ್ನು ತೋರಿಸಿದನು. ಜನರ ಸ್ವಭಾವವೆಲ್ಲ ಹೀಗೆಯೇ ಸರಿ. ಸ್ತೋತ್ರದಿಂದ ಜನರಿಗೆ ಮನಸ್ಸು ಕರಗುವಂತೆ ಮತ್ತೇತರಿಂದಲೂ

ಆಗಲಾರದು. ರಾಮುದಾಸನು ವಿದ್ಯಾವಂತನಲ್ಲ. ಅವನಿಗೆ ಹೀಗಾದುದು ಏನೂ ಆಶ್ಚರ್ಯವಲ್ಲ. ರಾಮುದಾಸನು ವರ್ಣನೆಮಾಡತೊಡಗಿದನು. ಅವನ ಹೇಳಿಕೆ ಯೆಲ್ಲವನ್ನೂ ಏಕತ್ರ ಸಂಗ್ರಹಿಸಿದರೆ ಒಂದು ದೊಡ್ಡ ಉಪನ್ಯಾಸವಾಗುವುದರಲ್ಲಿ ಏನೂ ಸಂಶಯವಿರುವುದಿಲ್ಲ. ಆದರೆ ಅವನು ಲೋಕಾಲಯದಲ್ಲಿ ಅಪರಿಚಿತ ನಾಗಿಯೂ ಅಶಿಕ್ಷಿತನಾಗಿಯೂ ಇದ್ದುದರಿಂದ ಅವನ ಉಪನ್ಯಾಸರಚನೆಯು ಪ್ರಚಾರಕ್ಕೆ ಬರಲು ಅವಕಾಶ ದೊರಯಲಿಲ್ಲ. ಇದು ಹಾಗಿರಲಿ.

ಕ್ರಮವಾಗಿ ಸುರಾಪಾನದಿಂದುಂಟಾದ ಮತ್ತತೆಯು ಉಪೇಂದ್ರನ ಮೇಲೆ ಸ್ವತಂತ್ರಾಧಿಕಾರ ಮಾಡಿತು. ರಾಧಾನಾಥನೂ ಪ್ರತಿಭಟಿಸದೇ ಆಧಿ ಪತ್ಯಕ್ಕೆ ವಶನಾದನು. ಉಪೇಂದ್ರನು ಮತ್ತೊಂದು ಸಲ ಪಾನಮಾಡಲು ರಾಮುದಾಸನಿಗೆ ಸಂಜ್ಞೆಮಾಡಿದನು. ರಾಧಾನಾಥನು ಮದ್ಯಪಾತ್ರೆಯನ್ನು ಕೈಯಲ್ಲಿ ಹಿಡಿದು ತೆಗೆದುಕೊಳ್ಳುವಂತೆ ರಾಮುದಾಸನನ್ನು ಪೀಡಿಸಿದನು. ರಾಮುದಾಸನು ಮೊದಲು ಅದಕ್ಕೆ ಒಪ್ಪಲಿಲ್ಲ. ನಿರ್ಬಂಧವು ಬಲವಾಯಿತು. ರಾಮುದಾಸನು ಯತ್ನವಿಲ್ಲದೇ ಕುಡಿದನು. ಅವನ ತಲೆಗೂ ರುಚಿಯು ಹತ್ತಿತು. ಅನಂತರ ಅವನೇ ಮದ್ಯವನ್ನು ಬಟ್ಟಲುಗಳಲ್ಲಿ ಹಾಕಿಕೊಂಡು ಆಕಂಠಪೂರ್ತಿ ಯಾಗಿ ಕುಡಿದುಬಿಟ್ಟನು. ಮದವೇರಿತು. ಮೂವರೂ ಮತ್ತರಾಗಿ ಕುಣಿ ಯುತ್ತಲೂ ಮನಬಂದಂತೆ ಮಾತನಾಡುತ್ತಲೂ ಕಾಲವನ್ನು ಕಳೆದರು.

ಉಪೇಂದ್ರನು ರಾಧಾನಾಥ ಮತ್ತು ರಾಮುದಾಸ ಇವರಿಬ್ಬರನ್ನೂ ಜತೆ ಯಲ್ಲಿ ಕರೆದುಕೊಂಡು ಹೋಗಿ ಶೋಭನೆಯನ್ನು ನೋಡಬೇಕೆಂಬ ಆಶೆಯನ್ನು ಪ್ರಕಾಶಪಡಿಸಿದನು. ಇಬ್ಬರೂ ಸಮ್ಮತಿಸಿದರು. ಮೊದಲು ಉಪೇಂದ್ರನು ಶೋಭನೆಯನ್ನು ನೋಡಬೇಕೆಂದು ಹೇಳಿದಾಗ, ರಾಧಾನಾಥನು ಏತಕ್ಕೆ ನಿವಾರಣೆ ಮಾಡಿದ್ದನೋ ಈಗ ಆ ಕಾರಣವು ಮರೆತು ಹೋಗಿತ್ತು. ಸಂತೋಷದಿಂದ ಈ ಮೂವರೂ ವಿಲಕ್ಷಣವಾಗಿ ಚೀತ್ಕಾರಮಾಡಿದರು. ಈ ಧ್ವನಿಯಿಂದ ಉದ್ಯಾನದ ಶಾಂತಿಭಾವವು ಭಂಗವಾಯಿತು. ಅದು ಹಾಗಿರಲಿ. ಉಪೇಂದ್ರನ ಭೃತ್ಯವರ್ಗ ದವರೆಲ್ಲರೂ ಬೆಚ್ಚಿಬಿದ್ದು ಏನೋ ಅಮಂಗಳವೆಂದು ಶಂಕಿಸಿದರು.

ಜ್ಞಾನಶೂನ್ಯರಾದ ಇವರು ಮುಂದೆ ಏನೇನು ಕಾರ್ಯಗಳನ್ನು ಮಾಡಿದ ರೆಂಬುದನ್ನು ನಮ್ಮ ವಾಚಕಮಹಾಶಯರಿಗೆ ತಿಳಿಸಲು ನಾವು ಲಜ್ಜಿಸುವೆವು. ನಮ್ಮ ಪವಿತ್ರವಾದ ಲೇಖನಿಯೂ ಕಲಂಕಿತವಾಗಿ ಹೋಗುವುದು. ಆದುದರಿಂದ ಅದನ್ನು ನಾವು ತ್ಯಾಗಮಾಡಿಬಿಡುವೆವು.

ಯಾವ ಉದ್ಯಾನದಲ್ಲಿ ಈ ಮೂವರೂ ಹುಚ್ಚರಂತೆ ಸಂಚರಿಸುತಲಿದ್ದರೋ, ಅಲ್ಲಿಯೇ ಪಂಜರದಲ್ಲಿ ನಿರ್ಬಂಧಿಸಲ್ಪಟ್ಟಿದ್ದ ಪಕ್ಷಿಯು ಇದ್ದಿತು. ಈ ಮೂರು

ಜನಗಳೂ ಅಲ್ಲಿಗೆ ಹೊರಟರು. ಮೂವರಲ್ಲಿ ಒಬ್ಬನಿಗೂ ಬುದ್ಧಿಯು ಸ್ವಾಧೀನದಲ್ಲಿರಲಿಲ್ಲ. ಅಲ್ಲಿದ್ದ ಮತ್ತೊಬ್ಬ ಭೃತ್ಯನು ಇವರು ಬಂದ ಸಂಗತಿಯನ್ನು ಚತುರೆಗೆ ತಿಳಿಸಿದನು. ಅವಳು ಕೋಪದಿಂದ ಹೊರಗೆ ಬಂದು ರಾಧಾನಾಥನನ್ನು ಬಾಯಿಗೆ ಬಂದ ಹಾಗೆ ಬೈದಳು. ಅವಳಿಗೆ ಉಪೇಂದ್ರನನ್ನೇ ಬೈಯ್ಯಬೇಕೆಂಬ ಉದ್ದೇಶ, ಆದರೆ ಆವಳಿಗೆ ಅವನನ್ನು ಅನ್ನುವಷ್ಟು ಸಾಹಸವಿಲ್ಲದೇ ರಾಧಾನಾಥನನ್ನು ಬೈದಳು. ಚತುರೆಗೆ ನಿಯಮಿಸಿದ್ದ ಕಾರ್ಯವು ಇನ್ನೂ ಫಲಿಸಿರಲಿಲ್ಲ. ಅಷ್ಟರೊಳಗಾಗಿಯೇ ಇವರು ಬಂದು ಬಿಟ್ಟರು. ಅವಳಿಗೆ ದಿಕ್ಕೇ ತೋರದಂತಾಗಿ ಮನೆಯೊಳಗೆ ಪ್ರವೇಶಮಾಡಿದಳು. ಉಪೇಂದ್ರನೂ ಅವಳ ಹಿಂದೆಯೇ ನುಗ್ಗಿದನು.

ಅಷ್ಟು ಹೊತ್ತಿಗೆ ಶೋಭನೆಯ ಪ್ರಾತಃಕೃತ್ಯವು ಇನ್ನೂ ಮುಗಿದಿರಲಿಲ್ಲ. ಆವಳ ಮುಖವು ಮರಣೋನ್ಮುಖವಾದ ಹಿಮಸಿಕ್ತವಾದ ಕಮಲದಂತೆ ಕಾಂತಿಹೀನವಾಗಿದ್ದಿತು. ರಾತ್ರಿಯೆಲ್ಲಾ ಅಳುತ್ತಿದ್ದುದರಿಂದ ಅವಳ ಕೆನ್ನೆಯ ಮೇಲೆ ಧಾರಾಕಾರವಾಗಿ ಹರಿದು ಬರುತ್ತಿದ್ದ ಕಣ್ಣೀರಿನ ಕಲೆಯು ಇನ್ನೂ ಅಳಿಸಿರಲಿಲ್ಲ. ರಾತ್ರಿ ಜಾಗರದಿಂದಲೂ ಉಪೇಂದ್ರನಲ್ಲಿನ ಆಗ್ರಹದಿಂದಲೂ ಅವಳ ಕಣ್ಣುಗಳೆರಡೂ ರಕ್ತವರ್ಣವನ್ನು ತಾಳಿ ನೋಡುವುದಕ್ಕೆ ಬಹಳ ಭಯಂಕರಗಳಾಗಿದ್ದುವು ಕೇಶರಾಶಿಯು ಬಿಚ್ಚಿಹೋಗಿ ಶರೀರದಲ್ಲಿ ಅಕ್ರಮವಾಗಿ ಕೆದರಿಹೋಗಿತು. ಉಟ್ಟ ಸೀರೆಯು ಅಷ್ಟು ಚೆನ್ನಾಗಿ ಶರೀರವನ್ನು ಮುಚ್ಚಿರಲಿಲ್ಲ. ಸುಂದರವಾದ ಅವಳ ದೇಹದಲ್ಲಿ ಒಂದು ವಿಧವಾದ ಕಪ್ಪುಬಣ್ಣ ಬಳಿದಿದ್ದಂತೆ ಕಂಡುಬರುತ್ತಿದ್ದಿತು.

ಶೋಭನೆಯು ಇಂತಹ ಅವಸ್ಥೆಯಲ್ಲಿರುವಾಗಲೇ ಚತುರೆಯು, ಆ ಕೋಣೆಗೆ ಬಂದಳು. ಅವಳ ಹಿಂದೆಯೇ ಉಪೇಂದ್ರನೂ ಸಿದ್ಧನಾಗಿದ್ದನು. ಉಪೇಂದ್ರನು ಅಲ್ಲಿಗೆ ಬಂದುದನ್ನು ಚತುರೆಯು ನೋಡಿ ಏನೇನೋ ಮಾತನಾಡಿದಳು. ಇದಾವುದೂ ಉಪೇಂದ್ರನಿಗೆ ಗೊತ್ತಾಗಲೇ ಇಲ್ಲ. ಅನಂತರ ಚತುರೆಯು ಮನಸ್ಸಿನಲ್ಲಿ ಏನೋ ಭಾವಿಸಿಕೊಂಡು ಆ ಕೋಣೆಯನ್ನು ಬಿಟ್ಟು ಹೊರಕ್ಕೆ ಹೊರಟುಹೋದಳು. ಉಪೇಂದ್ರನು ಮಿತಿಮೀರಿದ ಪ್ರೇಮದಿಂದ "ಶೋಭನೆ" ಎಂದನು.

ಭಯಪಟ್ಟ ಹೆಂಣುಜಿಂಕೆಯು, ವ್ಯಾಧನ ಪದ ಶಬ್ದವನ್ನು ಕೇಳಿದ ಮಾತ್ರಕ್ಕೇ ಚಕಿತವಾಗಿ ಒಂದೇ ದೃಷ್ಟಿಯಿಂದ ಆ ದಿಕ್ಕನ್ನೇ ಹೇಗೆ ನೋಡುವುದೋ, ಹಾಗೆಯೇ ಶೋಭನೆಯೂ ಉಪೇಂದ್ರನ ಕಂಠಸ್ವರವನ್ನು ಕೇಳಿದೊಡ

ನೆಯೇ ತನ್ನ ಸೀರೆಯನ್ನು ಸರಿಮಾಡಿಕೊಂಡು ಉಪೇಂದ್ರನನ್ನೇ ದುರಗುಟ್ಟಿ ಕೊಂಡು ನೋಡಿದಳು.

ಉಪೇಂದ್ರನು ಇದನ್ನು ಗಮನಿಸದೇ ಶೋಭನೆಯ ಹತ್ತಿರಕ್ಕೆ ಹೋದನು. ಶೋಭನೆಗೆ ಮೈಯೆಲ್ಲ ಕಂಪವೇರಿತು. ಬಾಯಿಯು ಒಣಗಿ ಹೋಯಿತು. ಮೈಯಲ್ಲಿ ಬೆವರಿಟ್ಟಿತು. ಭಯದಿಂದ ಜ್ಞಾನಶೂನ್ಯಳಾದವಳ ಹಾಗಾದಳು. ಉಪೇಂದ್ರನು ಮತ್ತೂ ಆದರದಿಂದ "ಶೋಭನೆ" ಎಂದು ಕೂಗಿದನು. ಉತ್ತರವಿಲ್ಲ. ಉತ್ತರವಿಲ್ಲದುದನ್ನು ನೋಡಿ, ಉಪೇಂದ್ರನು ಅವಳನ್ನು ಹಿಡಿದುಕೊಳ್ಳುವುದಕ್ಕೆ ಹತ್ತಿರಹೋದನು. ಶೋಭನೆಯ ಮೈಯಲ್ಲಿ ದೈವಯೋಗದಿಂದ ಒಂದು ವಿಧವಾದ ಶಕ್ತಿಯುಂಟಾಯಿತು. ಆ ಶಕ್ತಿಯಿಂದ ಶೋಭನೆಯು ಒಂದು ನೆಗೆಯನ್ನು ನೆಗೆದು ದೂರದಲ್ಲಿ ಹೋಗಿ ನಿಂತುಕೊಂಡಳು. ಉಪೇಂದ್ರನು ಅಲ್ಲಿಗೂ ಬಿಡಲಿಲ್ಲ. ಶೋಭನೆಯು ಈ ದುರಾಚಾರಿಯ ಸಹವಾಸವನ್ನು ತಪ್ಪಿಸಿಕೊಂಡು ಹೋಗಲೋಸುಗ ಬಾಗಿಲ ಹತ್ತಿರ ಬಂದು, ಬಾಗಿಲನ್ನು ತೆಗೆಯಲು ಯತ್ನ ಮಾಡಿದಳು. ಆದರೆ ಹೊರಗಡೆ ಯಾರೋ ಚಿಲುಕಹಾಕಿಕೊಂಡು ಹೋಗಿದ್ದರು.

ಈ ಮೋಸಕೃತ್ಯವು ಚತುರೆಯದೆಂದು ಶೋಭನೆಗೆ ಗೊತ್ತಾಗಿ ಬಹಳವಾಗಿ ಪರಿತಾಪಪಟ್ಟು, ಅವಳು ಒಂದು ಮೂಲೆಯಲ್ಲಿ ಹೋಗಿ ನಿಂತುಕೊಂಡಳು. ಉಪೇಂದ್ರನು ಅವಳನ್ನು ಹಿಡಿದುಕೊಳ್ಳುವುದಕ್ಕೆ ಹೋದನು. ಶೋಭನೆಯು ಕಿಟಕಿಯ ಹತ್ತಿರಕ್ಕೆ ಓಡಿದಳು. ಅಲ್ಲಿಯೂ ಬಾಧೆಯು ತಪ್ಪದೆ ಮತ್ತೊಂದು ಕಡೆಗೆ ಓಡಿದಳು. ಇದರಿಂದಲೂ ಮುಕ್ತಿಯು ಕಂಡುಬರದೆ ಶೋಭನೆಯು ಉಪಾಯಾಂತರವನ್ನು ಹುಡುಕುವ ವ್ಯಾಜದಿಂದ ಕೋಣೆಯ ನಾಲ್ಕು ದಿಕ್ಕನ್ನೂ ನೋಡಿದಳು. ಮಂಚದ ಕೆಳಗೆ ಒಂದು ಒಡೆದುಹೋಗಿದ್ದ ಗಾಜಿನ ಬಟ್ಟಲು, ಒಂದು ಸಣ್ಣ ಹಲಗೆಯೂ ಬಿದ್ದಿದ್ದುವು. ಕೂಡಲೆ ಶೋಭನೆಯು ಅಲ್ಲಿಗೆ ಹೋಗಿ ಅವುಗಳನ್ನು ತೆಗೆದುಕೊಂಡಳು. ಉಪೇಂದ್ರನಿಗೆ, ಮತ್ತತೆಯಿಂದಲೂ, ಶೋಭನೆಯನ್ನು ಹೊಂದುವೆನೆಂಬ ಆಶೆಯಿಂದಲೂ, ಇವಳು ತೆಗೆದುಕೊಂಡ ಪದಾರ್ಥಗಳು ಕಾಣಿಸಲಿಲ್ಲ. ಉಪೇಂದ್ರನು ಮತ್ತೊಂದಾವೃತ್ತಿ ಅವಳನ್ನು ಹಿಡಿಯಲು ಓಡಿದನು. ಶೋಭನೆಯು ನಿರುಪಾಯಳಾಗಿ ಇದ್ದಲ್ಲಿಯೇ ಇದ್ದುಬಿಟ್ಟಳು. ಉಪೇಂದ್ರನು ಸಮೀಪಿಸಿದನು. ಅವಳ ಕೈಸೋಕಿತು. ಕೂಡಲೆ ಶೋಭನೆಯು, ಉಪೇಂದ್ರನನ್ನು ನೋಡಿ, "ನೀಚನೆ ದೂರಹೋಗು. ನಾರೀಮಣಿಗಳಿಗೆ ಸತೀತ್ವವೇ ಪರಮಧರ್ಮ. ಅದನ್ನು ಕಾಪಾಡಿಕೊಳ್ಳುವುದನ್ನು ಅಭ್ಯಾಸ ಮಾಡುವುದಕ್ಕಾಗಿಯೇ ಅವರು ಪ್ರಪಂಚದಲ್ಲಿ ಜನ್ಮಗ್ರಹಣಮಾಡಿರುವರು. ಯಾವ ಹೆಂಗುಸು ಪಿಶಾಚಿಯೋ, ಯಾವಳಿಗೆ ಧರ್ಮದಲ್ಲಿ ವಿಶ್ವಾಸವಿಲ್ಲವೋ,

ಯಾವಳಿಂದ ಭೂಮಾತೆಯು ಕಳಂಕಿತಳಾಗುವ ಸಂಭವವುಂಟೋ, ಅಂತಹ ಳೊಡನೆ, ನರಪಿಶಾಚನು ಪಶುವೃತ್ತಿಯನ್ನಾಚರಿಸಲು ಶಕ್ತನಾಗಬಹುದು." ಉಪೇಂದ್ರ! ಪತಿವ್ರತಾಶಿರೋಮಣಿಯ ಪಾತಿವ್ರತ್ಯವನ್ನು ಲೋಪಮಾಡುವುದು ನಿನ್ನಿಂದ ಸಾಧ್ಯವೇ?" ಎಂದು ಗದ್ದರಿಸಿದಳು.

ಹೀಗೆ ಹೇಳುತ ಹೇಳುತ ಶೋಭನೆಯು ಸ್ವಲ್ಪ ಹಿಂದೆ ಸರಿದಳು. ಉಪೇಂದ್ರನಿಗೆ ಸ್ಥಿರಗಂಭೀರವಾಗಿಯೂ ಪ್ರತಿಜ್ಞಾವ್ಯಂಜಕವಾಗಿಯೂ ಇರುವ ಶೋಭನೆಯ ಆ ಮೂರ್ತಿಯನ್ನು ನೋಡಿ ಸ್ವಲ್ಪ ಭಯವುಂಟಾಯಿತು. ಉಪೇಂದ್ರನು ಏನೊಂದನ್ನೂ ಮಾತನಾಡದೇ, ಆ ಕೋಣೆಯನ್ನು ಬಿಟ್ಟು ತೊಲಗುವುದಕ್ಕೋಸ್ಕರ ಚತುರೆಯನ್ನು ಕೂಗಿದನು. ಚತುರೆಯು ಬಾಗಿಲ ಹೊರಗೇ ನಿಂತುಕೊಂಡು, ಒಳಗಿನ ಸಂಗತಿಯೆಲ್ಲವನ್ನೂ ನೋಡುತ್ತಿದ್ದಳು. ಉಪೇಂದ್ರನ ಧ್ವನಿಯನ್ನು ಕೇಳಿದೊಡನೆಯೇ ಅವಳು ಬಾಗಿಲನ್ನು ತೆಗೆದಳು. ಉಪೇಂದ್ರನು ಹೊರೆಗೆ ಬಂದು ಏನೇನೋ ಗೊಣಗುಟ್ಟಿಕೊಳ್ಳುತ್ತಾ ರಾಧಾನಾಥನನ್ನೂ, ರಾಮದಾಸನನ್ನೂ ಕರೆದುಕೊಂಡು ಹೊರಟುಹೋದನು.

---

## ಇಪ್ಪತ್ತೇಳನೆಯ ಪರಿಚ್ಛೇದ

ಇಂದಿರೆಯು ಚಂದ್ರಮಾಮನ ದಳದಲ್ಲಿ ಸೇರಿಕೊಂಡು ಕೆಲಸಮಾಡುತ್ತಿರುವಳೆಂಬುದು ನಮ್ಮ ವಾಚಕರಿಗೆ ಗೊತ್ತೇ ಇರಬಹುದು. ಆ ದಳದಲ್ಲಿ ಇಂದಿರೆಗೆ ಒಂದು ಗಣ್ಯವಾದ ಅಧಿಕಾರವು ಇದ್ದಿತು. ಚಂದ್ರಮಾಮನು ಪ್ರಕೃತಕಾಲದಲ್ಲಿ ಸಮಸ್ತವಾದ ಕಾರ್ಯಭಾರವನ್ನೂ ಇವಳ ಮೇಲೆ ಹಾಕಿ ತಾನು ನಿಶ್ಚಿಂತನಾಗಿರುತಿದ್ದನು. ಇಂದಿರೆಯು ಈಗ ವಹಿಸಿದ್ದ ಕಾರ್ಯವು ಸ್ವಲ್ಪ ಗುರುತರವಾಗಿಯೇ ಇದ್ದಿತು. ಅದಕ್ಕಾಗಿಯೇ ಅವಳು ಅಲ್ಲಲ್ಲಿ ಸಂಚರಿಸಬೇಕಾಗಿ ಬಂದಿತು. ಏನು ಮಾಡಿದರೆ ಕಾರ್ಯಸಾಧನೆಯುಂಟಾಗುವುದೆಂದು ಇಂದಿರೆಯು ಆಲೋಚಿಸುತ್ತಿರುವಾಗ ಅವಳಿಗೆ ಸುಲೋಚನೆಯ ಜ್ಞಾಪಕವು ಬಂದಿತು. ಸುಲೋಚನೆಯಿಂದ ಅನೇಕ ಸಂಗತಿಗಳು ಹೊರಪಡಬಹುದೆಂದು ತಿಳಿದು ಅವಳು ಅಲ್ಲಿಗೆ ಹೊರಟಳು.

ರಾತ್ರಿ ಕಾಲ. ಮೇಲು ಭಾಗದಲ್ಲಿ ಅನಂತವಾದ ನೀಲಾಕಾಶ. ಅಲ್ಲಿ ಅನೇಕಾನೇಕ ನಕ್ಷತ್ರಗಳು ವಜ್ರದ ಖಂಡಗಳಂತೆ ಮಿನುಗುಟ್ಟುತ್ತಿರುವುವು. ಸಪ್ತಮಿಯ ಚಂದ್ರನು ತಾರಕೆಗಳೊಡನೆ ವಿಧವಿಧವಾದ ಕ್ರೀಡೆಗಳನ್ನಾಡುತ್ತಾ ಗಗನಾಂಗಣವನ್ನು ಬಿಟ್ಟು ತೆರಳುವುದರಲ್ಲಿದ್ದನು. ಈ ಸಮಯಕ್ಕೆ ಸರಿಯಾಗಿ

ಇಂದಿರೆಯು ಸುಲೋಚನೆಯ ಮನೆಯ ಬಾಗಿಲಲ್ಲಿ ಬಂದು ನಿಂತಳು. ಆದಿನ ಸುಲೋಚನೆಯು ಇನ್ನೂ ನಿದ್ರೆ ಹೋಗಿರಲಿಲ್ಲ. ಅಷ್ಟು ಹೋತ್ತಾಗಿದ್ದರೂ, ಅವಳಿಗೆ ರಾತ್ರಿಯ ಊಟವು ಇನ್ನೂ ಆಗಿರಲಿಲ್ಲ. ಆ ದಿನ ಅಗ್ನಿದೇವನಿಗೆ ದುರಂತವಾದ ಕೋಪವು ಬಂದಿದ್ದಿತು. ಆ ಕೋಪವು ವೃದ್ಧೆಯಾದ ಸುಲೋಚನೆಯ ಮುಖದ ಫೂತ್ಕಾರದಿಂದ ಶಮನವಾಗಲಿಲ್ಲ. ಹೊಗೆಯಿಂದ ಮುದುಕಿಯ ಕಣ್ಣುಗಳಲ್ಲಿ ಬಲವಾಗಿ ನೀರು ತುಂಬಿಕೊಂಡಿತು. ಅವಳೂ ಅತ್ತುಬಿಟ್ಟಳು. ಅತ್ತೂ ಅತ್ತೂ ಸಾಕಾಯಿತು. ಅವಳ ರಕ್ತಹೀನವಾದ ಕಣ್ಣುಗಳು ಕೆಂಪೇರಿದುವು. "ಈ ಹಾಳು ಹೊಟ್ಟೆಗೋಸ್ಕರವಲ್ಲವೇ ಕಣ್ಣುಗಳನ್ನು ಕೂಡ ಕಳೆದುಕೊಳ್ಳುವ ಹೊತ್ತುಬಂದಿತು" ಎಂದು ವೃದ್ಧೆಯು ಬಹಳವಾಗಿ ಮನನೊಂದುಕೊಂಡಳು. ಇವಳ ವ್ಯಸನವನ್ನು ತಿಳಿಯುವವರಾರು? "ಒಂದು ದಿನ ಆಹಾರವಿಲ್ಲದೇ ಹೋದರೆ ತಾನೆ ಏನು?" ಎಂದು ವೃದ್ಧೆಯು ನಿಶ್ಚಯಿಸಿ ಅಗ್ನಿಯ ತಲೆಯ ಮೇಲೆ ನೀರು ಸುರಿದುಬಿಟ್ಟು, ಹಾಸಿಗೆ ಹಾಸಿಕೊಂಡು ಮಲಗಿಕೊಳ್ಳುವುದೇ ಸರಿಯೆಂದು ಇತ್ಯರ್ಥಮಾಡುವುದರಲ್ಲಿದ್ದಳು. ಅಷ್ಟು ಹೊತ್ತಿಗೆ ಸರಿಯಾಗಿ ಇಂದಿರೆಯು ಅಲ್ಲಿಗೆ ಬಂದುಸೇರಿದಳು. ಬಾಗಿಲು ಹಾಕಿದ್ದುದನ್ನು ನೋಡಿ, "ಅಮ್ಮಾ!" ಎಂದು ಕೂಗಿದಳು. ಇಂದಿರೆಯು ಕೂಗುವಳೆಂದು ಸುಲೋಚನೆಗೆ ಗೊತ್ತಾಯಿತು. ಆದರೂ ಅವಳು ಬಂದು ಬಾಗಿಲನ್ನು ತೆಗೆಯಲಿಲ್ಲ.

ಇಂದಿರಾ—(ಗಟ್ಟಿಯಾಗಿ) "ಅಮ್ಮಾ!"

ಸುಲೋಚನಾ—ಯಾರು—ಇಂದಿರೆಯೆ?

ಇಂದಿರಾ—ಹೌದು ತಾಯಿ.

ಸುಲೋಚನೆಯು ಬಂದು ಬಾಗಿಲನ್ನು ತೆರೆದಳು. ಈ ಹೊತ್ತು ಅವಳಿಗೆ ಪಿಶಾಚದ ಭಯವಿರಲಿಲ್ಲ. ಏತಕ್ಕೆಂದರೆ—ರಾತ್ರಿಯು ಬಹಳ ಹೊತ್ತಾಗಿರಲಿಲ್ಲ. ಜನಗಳು ಇನ್ನೂ ಬೀದಿಗಳಲ್ಲಿ ತಿರುಗಾಡುತಲಿದ್ದರು. ಅದಕ್ಕಾಗಿಯೇ ಸುಲೋಚನೆಯು, ಇಂದಿರೆಯು ಕೂಗಿದೊಡನೆಯೇ ಬಂದು ಬಾಗಿಲು ತೆರೆದಳು. ಬಾಗಿಲು ತೆರೆದ ಕೂಡಲೆ ಇಂದಿರೆಯು ಸಲೋಚನೆಯನ್ನು ನೋಡಿದಳು. ಅವಳ ಕಣ್ಣುಗಳಲ್ಲಿಯೂ ಮೂಗಿನಲ್ಲಿಯೂ ನೀರು ಸುರಿಯುತಲಿದ್ದಿತು. ಇದನ್ನು ನೋಡಿ ಇಂದಿರೆಯು "ಅಮ್ಮಾ, ಏತಕ್ಕೆ ಅಳುತಿರುವೆ?" ಎಂದಳು.

ಸುಲೋಚನಾ—ಅಳುವುದಿಲ್ಲ. ಈ ಹಾಳು ಹೊಟ್ಟೆಗೋಸ್ಕರವಾಗಿ ಕಣ್ಣುಗಳೆರಡನ್ನೂ ಕಳೆದುಕೊಳ್ಳಬೇಕಾಗಿದೆ.

ಇಂದಿರಾ—ಅದೇಕೆ?

ಸುಲೋಚನಾ—ಈದಿನ ಹಗಲಲ್ಲಿ ಏನೂ ಸಿಕ್ಕಲಿಲ್ಲ. ಮನೆಯಲ್ಲಿರುವುದನ್ನೇ ರಾತ್ರಿಯಲ್ಲಿ ಒಂದಾವೃತ್ತಿ ಬೇಯಿಸಿಕೊಂಡು ಊಟಮಾಡೋಣವೆಂದು ಈಗ ಒಲೆಗೆ ಬೆಂಕಿಯನ್ನು ಹಾಕಿದೆನು. ಹಾಳು ಬೆಂಕಿಯು ಏನು ಮಾಡಿದರೂ ಉರಿಯುವುದಿಲ್ಲ. ನನಗೆ ಊಟವಿಲ್ಲದೆ ಮಲಗಿಕೊಂಡುಬಿಡುವಷ್ಟು ಬೇಜಾರಾಗಿ ಹೋಗಿದೆ.

ಇಂದಿರಾ—(ಸ್ವಲ್ಪ ನಕ್ಕು) ಅಮ್ಮ! ಮುದುಕಿಯೊಡನೆ ಯಾರಾದರೂ ಸರಸವಾಡಬಹುದೆ! ನಿನ್ನ ಮುಖ ನೋಡಿ ಅಗ್ನಿದೇವನು ನಗುವುದೆಂದರೇನು? ನೋಡು ನನ್ನ ಮುಖವನ್ನು ನೋಡಿದೊಡನೆಯೇ, ಬ್ರಹ್ಮಾಂಡವನ್ನಾದರೂ ದಗ್ಧವಾಗಿ ಮಾಡಿಬಿಡುವ ಅಗ್ನಿಯು ಆನಂದದಿಂದ ಪ್ರಜ್ವಲಿಸುವನು.

ಸುಲೋಚನಾ—ಅದೇನೋ ನಿಜ. ನಾನೂ ನಿನ್ನಂತೆಯೇ ಇದ್ದಿದ್ದರೆ, ಅಗ್ನಿಯೇ ಅಲ್ಲ—ಯಾರಾದರೂ ಆನಂದದಿಂದ ಹಿಗ್ಗುತಿದ್ದರು.

ಇಂದಿರಾ—ನಿನಗೆ ಅಂತಹ ದಿನಗಳು ಕಳೆದುಹೋಗಿದ್ದರೂ, ಕೇವಲ ಚಾಪಲ್ಯವೊಂದೇ ಉಳಿದಿರುವುದು. ಇತ್ತಬಾ. ಕೈಲಾಗದ ಮೇಲೆ ಇಂತಹ ಕೆಲಸಕ್ಕೆ ಏತಕ್ಕೆ ಪ್ರವೇಶಿಸಬೇಕು?

ಇಂದಿರೆಯು ಈರೀತಿಯಾಗಿ ಹೇಳುತ್ತಾ, ಅಡಿಗೆಯ ಮನೆಯೊಳಗೆ ಪ್ರವೇಶ ಮಾಡಿದಳು. ಅಲ್ಲಿ ಅಡಿಗೆಗೆ ಬೇಕಾದ ಸಾಮಗ್ರಿಯು ಸಿದ್ಧವಾಗಿದ್ದಿತು. ಒಲೆಯು ಮಾತ್ರ ಉರಿಯದೆ ತಂಟೆಮಾಡುತಿದ್ದಿತು. ಇದನ್ನು ನೋಡಿ ಇಂದಿರೆಯು, "ಅಮ್ಮ! ನಾನೂ ಇಲ್ಲಿಯೇ ಈ ದಿನ ಊಟಮಾಡುವೆನು." ಎಂದು ಹೇಳಿ, ಒಲೆಯನ್ನು ಊದುವುದಕ್ಕೆ ಕುಳಿತುಕೊಂಡಳು. ಅಗ್ನಿಯು ತನ್ನ ಆನಂದವನ್ನು ಶಿಖೆಗಳ ಮುಖಾಂತರ ತೋರ್ಪಡಿಸಲಾರಂಭಿಸಿದನು. ನಿರಾಶೆಯಾಗಿದ್ದ ಮುದುಕಿಯ ಹೃದಯದಲ್ಲಿ ಸ್ವಲ್ಪ ಆಶಾಸಂಚಾರವಾಯಿತು. ಬೆಂಕಿಯು ಧಕ್‌ಧಕ್ ಎಂದು ಉರಿಯುತ್ತಿತ್ತು. ಇಂದಿರೆಯು ಅಡಿಗೆಯನ್ನು ಮಾಡಿದಳು. ಸುಲೋಚನೆಯು ಇಂದಿರೆಯ ಹತ್ತಿರವೇ ಕುಳಿತು ಏನೇನೋ ಮಾತುಗಳನ್ನಾಡುತಿದ್ದಳು.

ಅಡಿಗೆಯಾಯಿತು. ಇಬ್ಬರೂ ಊಟಕ್ಕೆ ಕುಳಿತರು. ಊಟ ಮಾಡುತ್ತಿರುವಾಗ, ಇಂದಿರೆಯು ಮುದುಕಿಯನ್ನು ನೋಡಿ "ಅಮ್ಮಾ, ಜಮೀಂದಾರನ ಮನೆಯ ವರ್ತಮಾನವೇನು?" ಎಂದು ಕೇಳಿದಳು.

ಸುಲೋಚನಾ—ನಾನು ಈ ನಡುವೆ ಅಲ್ಲಿಗೆ ಹೋಗಲಿಲ್ಲ. ಕೆಲಸ ತಾನೇ ಏನು? ಜಮೀಂದಾರನು ಬೇಕಾದಷ್ಟು ಹಣ ವೆಚ್ಚಮಾಡಿ ಎಲ್ಲಿಂದಲೋ ಒಬ್ಬ

ಹುಡುಗಿಯನ್ನು ಕದ್ದು ತಂದಿರುವನಂತೆ. ಅವಳಿಗೋಸ್ಕರ ಸರ್ವಸ್ವವನ್ನೂ ಕಳೆದುಕೊಳ್ಳುವುದರಲ್ಲಿರುವನಂತೆ, ಆ ಹುಡುಗಿಯನ್ನು ನೋಡಿಕೊಳ್ಳುವುದಕ್ಕೆ ಒಬ್ಬ ಹೆಂಗುಸನ್ನು ಸಂಬಳ ಕೊಟ್ಟು ಇಟ್ಟುಕೊಂಡಿರುವನಂತೆ.

ಇಂದಿರಾ—ಆ ಹುಡುಗಿ ಯಾರು ಗೊತ್ತುಂಟೆ? ಅವಳನ್ನು ಎಲ್ಲಿ ತಂದಿಟ್ಟಿರುವನು?

ಸುಲೋಚನಾ—ಅವನ ಸ್ನೇಹಿತನ ತೋಟದಲ್ಲಿ.

ಇಂದಿರೆಯು ಮತ್ತಾವ ಮಾತನ್ನೂ ಆಡಲಿಲ್ಲ. ಇಬ್ಬರೂ ಊಟವನ್ನು ತೀರಿಸಿಕೊಂಡು ಒಟ್ಟಿಗೆ ಮಲಗಿದರು. ಮತ್ತಾವ ಮಾತೂ ನಡೆಯಲಿಲ್ಲ.

ಬೆಳಗಾಯಿತು. ಇಂದಿರೆಯು ಬೇಗನೆ ಹಾಸಿಗೆಯಿಂದೆದ್ದು ಮನೆಯ ಕೆಲಸವನ್ನೆಲ್ಲಾ ತೀರಿಸಿಕೊಂಡು, ಮುದುಕಿಯ ಕೈಗೆ ಕೆಲವು ರೂಪಾಯಿಗಳನ್ನು ಕೊಟ್ಟು, ಮನೆಗೆ ಬೇಕಾದ ಸಾಮಾನುಗಳನ್ನು ತರುವುದಕ್ಕೆ ಅಂಗಡಿಗೆ ಕಳುಹಿಸಿದಳು.

ಸುಲೋಚನೆಯ ಸಂತೋಷಕ್ಕೆ ಪಾರವೇ ಇರಲಿಲ್ಲ. ಅವಳು ಅಂಗಡಿಗೆ ಹೋಗಿ ತನಗೆ ಇಷ್ಟಬಂದ ಪದಾರ್ಥಗಳನ್ನೆಲ್ಲವನ್ನೂ ತಂದಳು. ಇಂದಿರೆಯು ಅಡಿಗೆ ಮಾಡಿ ಮುದುಕಿಗೆ ಬಡ್ಡಿಸಿ ತಾನೂ ಊಟಮಾಡಿದಳು. ಬಳಿಕ ಮುದುಕಿಯು, "ಮಗು, ನೀನು ಸ್ವಲ್ಪ ಇಲ್ಲಿಯೇ ಇರು. ನಾನು ಒಂದಾವೃತ್ತಿ ಜಮೀನ್ದಾರನ ಮನೆಗೆ ಹೋಗಿ ಬರುವೆನು" ಎಂದಳು.

ಇಂದಿರೆಗೂ ಅದೇ ಇಷ್ಟವಿದ್ದಿತು. ಆದರೆ ಅವಳು ಕೇಳಲಿಲ್ಲ. ಈಗ ಮುದುಕಿಯು ಕೇಳಿದುದರ ಮೇಲೆ "ಅಮ್ಮಾ! ತಿಳಿಯಬಹುದಾದರೆ ಆ ಹುಡುಗಿಯ ವೃತ್ತಾಂತವನ್ನು ಆದ್ಯೋಪಾಂತವಾಗಿ ತಿಳಿದುಕೊಂಡು ಬಾ." ಎಂದು ಇಂದಿರೆಯು ಹೇಳಿದಳು. ಮುದುಕಿಯು ಹೊರಟುಹೋದಳು. ಇಂದಿರೆಯು ಮನೆಯಲ್ಲಿಯೇ ಇದ್ದುಕೊಂಡು ಬೇರೆ ಕೆಲಸವನ್ನು ನೋಡಿಕೊಳ್ಳುತಿದ್ದಳು.

ಸ್ವಲ್ಪ ಹೊತ್ತಾದ ಮೇಲೆ, ಮುದುಕಿಯು ಹಿಂದಿರುಗಿ ಬಂದು, ಶೋಭನೆಯ ವೃತ್ತಾಂತವೆಲ್ಲವನ್ನೂ ತಿಳಿಸಿದಳು. ಇದನ್ನು ಕೇಳಿದೊಡನೆಯೇ ಕೋಪದಿಂದ ಇಂದಿರೆಯ ಮೈಯೆಲ್ಲಾ ಉರಿಯಲಾರಂಭಿಸಿತು. ಅವಳು ತನ್ನ ಕೋಪವನ್ನು ಬಹಿರಂಗಮಾಡದೆ, ಸುಲೋಚನೆಯನ್ನು ಕುರಿತು, "ಅಮ್ಮಾ! ನಾನು ದೂರವಾಗಿರುವ ಒಂದು ಗ್ರಾಮಕ್ಕೆ ಹೋಗಬೇಕೆಂದಿರುವೆನು. ಹೊತ್ತಾಗಿ ಹೋದರೆ, ರಾತ್ರಿ ಅಲ್ಲಿಗೆ ಹೋಗಲು ಸಾಧ್ಯವಿಲ್ಲ. ಆದುದರಿಂದ ಈಗಲೇ ಹೋಗಿ

ಬಿಟ್ಟು ಬರುವೆನು'' ಎಂದು ಹೇಳಿ, ಮುದುಕಿಯಿಂದ ಅಪ್ಪಣೆಯನ್ನು ತೆಗೆದು ಕೊಂಡು ಚಂದ್ರಮಾಮನು ಇದ್ದ ಸ್ಥಳಕ್ಕೆ ಹೊರಟಳು. ಸುಲೋಚನೆಯು ಆ ರಾತ್ರಿ ಏನನ್ನೂ ಊಟಮಾಡದೆ ಮಲಗಿಬಿಟ್ಟಳು.

---

## ಇಪ್ಪತ್ತೆಂಟನೆಯ ಪರಿಚ್ಛೇದ

ಉಪೇಂದ್ರನಾರಾಯಣನು ಶೋಭನೆಯನ್ನು ಬಿಟ್ಟು ಹೊರಟುಹೋದುದು ಸರಿಯಷ್ಟೆ. ಆದರೆ ಶೋಭನೆಯ ಹೃದಯದಲ್ಲಿ ಆವ ಶಂಕೆಯು ವ್ಯಾಪಿಸಿಕೊಂಡಿದ್ದಿತೋ, ಅದು ಮಾತ್ರ ಇನ್ನೂ ಬಿಟ್ಟಿರಲಿಲ್ಲ. ಅದಕ್ಕಾಗಿಯೇ ಅವಳು, ಚತುರೆಯು ಬರುವುದಕ್ಕೆ ಮುಂಚೆ, ಆತ್ಮರಕ್ಷಣೆಗಾಗಿ ಸಂಗ್ರಹಿಸಿದ್ದ ಎರಡು ಪದಾರ್ಥಗಳನ್ನು ಹಾಸಿಗೆಯ ಕೆಳಗೆ ಮುಚ್ಚಿಟ್ಟಿದ್ದಳು.

ಸ್ವಲ್ಪ ಹೊತ್ತಿನ ಮೇಲೆ ಚತುರೆಯು ಕೋಣೆಯೊಳಗೆ ಪ್ರವೇಶಿಸಿ, ಶೋಭನೆಯನ್ನು ಭೋಜನ ಮಾಡುವುದಕ್ಕೆ ಎಬ್ಬಿಸಿದಳು. ಶೋಭನೆಯು ಯಾವ ಮಾತನ್ನೂ ಆಡದೆ ಹಾಸಿಗೆಯ ಮೇಲೆ ಸುಮ್ಮನೆ ಮಲಗಿದ್ದಳು. ಎಷ್ಟು ವಿಧವಾಗಿ ಕೇಳಿಕೊಂಡರೂ, ಶೋಭನೆಯು ಭೋಜನಕ್ಕೆ ಏಳದಿರುವುದನ್ನು ನೋಡಿ ಚತುರೆಯು ಬೇಸತ್ತು ಬಾಯಿಗೆ ಬಂದ ಹಾಗೆ ಬೈಯುತ್ತಾ ಹೊರಟುಹೋದಳು. ಅವಳು ಹೊರಟುಹೋದೊಡನೆಯೇ ಶೋಭನೆಯು ಒಳಗಡೆ ಚಿಲಕಹಾಕಿಕೊಂಡು ಕಿಟಕಿಯ ಬಳಿ ಬಂದು ಕುಳಿತಳು.

ನೋಡುತಿದ್ದ ಹಾಗೆಯೇ ಸೂರ್ಯನು ಅಸ್ತಾಚಲ ಪ್ರಣಯಿಯಾದನು. ಅಂಧಕಾರವು ಎಲ್ಲೆಲ್ಲಿಯೂ ಆವರಿಸಲು, ಭೂಮಿಯು ಕರಿಯ ಸೀರೆಯನ್ನುಟ್ಟುಕೊಂಡಿರುವಂತೆ ಕಾಣಿಸಿಕೊಂಡಿತು. ಈ ಸೊಬಗನ್ನು ನೋಡುವುದಕ್ಕೆ ಚಂದ್ರನು ಆಕಾಶವನ್ನೇರಿ ಸಂತೋಷದಿಂದ ತನ್ನ ಕರಗಳನ್ನು ಭೂಮಿಯ ಮೇಲೆ ಪ್ರಸರಿಸಿದನು. ಭೂಮಿಯು ಸ್ತ್ರೀಜನ ಸಾಧಾರಣವಾದ ನಾಚಿಕೆಯಿಂದ ತನ್ನ ಅಂಗಾಂಗಗಳನ್ನು ಸೀರೆಯಿಂದ ಅಲ್ಲಲ್ಲಿ ಮರೆಮಾಡಿಕೊಳ್ಳುತ್ತಿದ್ದಳು. ಶೋಭನೆಯು ಕಿಟಕಿಯಿಂದ ಪ್ರಕೃತಿಯ ಸೌಂದರ್ಯವನ್ನು ನೋಡುತ್ತಾ ಏನೇನೋ ಚಿಂತಿಸುತಿದ್ದಳು. ಮನಸ್ಸಿನ ಆವೇಗವನ್ನು ಒಂದೇ ಸಲ ನಿಲ್ಲಿಸಿಬಿಡುವುದು ಶೋಭನೆಗೆ ಅಸಾಧ್ಯವಾಗಿ ಕಂಡುಬಂದಿತು. ತನ್ನ ಪ್ರಥಮಾವಸ್ಥೆಯು ಜ್ಞಾಪಕಕ್ಕೆ ಬಂದಿತು. ಅದು ಕ್ರಮವಾಗಿ ವಿಪರೀತವಾಗಿ ಪರಿಣಮಿಸಿ ಶೋಭನೆಗೆ ದಿಕ್ಕು ತೋರದಂತೆ ಮಾಡಿಬಿಟ್ಟಿತು. ಮಧ್ಯೇಮಧ್ಯೇ ನರೇಂದ್ರನಾಥನ ವಿಷಯವು ಜ್ಞಾಪಕಕ್ಕೆ ಬಂದು, ಶೋಭನೆಯನ್ನು ಅಳುವಂತೆ ಮಾಡುತಿದ್ದಿತು. ಶೋಭನೆಯು ಸ್ಥಿರಮಾಡಿಕೊಂ

ಡಳು. "ನರೇಂದ್ರನಾಥನು ಬದುಕಿದ್ದ ಪಕ್ಷದಲ್ಲಿ ತನಗೆ ಇಂತಹ ದುರ್ದಶೆಯು ಎಂದಿಗೂ ಬರುತ್ತಿರಲಿಲ್ಲ; ತಾಯ್ತಂದೆಗಳೂ ಈರೀತಿಯಾಗಿ ತನ್ನನ್ನು ತ್ಯಾಗ ಮಾಡುತ್ತಿರಲಿಲ್ಲ. ಇದನ್ನು ನೋಡಿದರೆ ನರೇಂದ್ರನು ಸತ್ತುಹೋಗಿ ನನ್ನನ್ನು ಶಾಶ್ವತವಾಗಿ ಬಿಟ್ಟುಬಿಟ್ಟಿರುವನು."

ಶೋಭನೆಯು ಹೀಗೆಲ್ಲಾ ಚಿಂತಿಸುತ್ತಾ ಮತ್ತೂ ಚಿಂತಿಸಲಾರಂಭಿಸಿದಳು. ಅದೇನೆಂದರೆ—ಮನುಷ್ಯನು ಸತ್ತರೆ ನಕ್ಷತ್ರವಾಗುವನೆಂದು ಕೇಳಿರುವೆನು. ನರೇಂದ್ರನೂ ಹಾಗಿಯೇ ಒಂದು ನಕ್ಷತ್ರವಾಗಿರಬೇಕು. ಅವನು ಆಕಾಶದಲ್ಲಿಯೇ ಇದ್ದುಕೊಂಡು ನನ್ನ ದುರ್ದಶೆಯನ್ನು ನೋಡುತ್ತಿರಬಹುದು. ನನ್ನ ಈ ಕಷ್ಟವನ್ನು ನೋಡಿಕೊಂಡು ಅವನೆಂದಿಗೂ ಸುಮ್ಮನಿರಲಾರನು. ನನ್ನನ್ನು ಕಷ್ಟದಿಂದ ಉದ್ಧಾರಮಾಡುವುದಕ್ಕೆ ಅವನು ಪ್ರಯತ್ನ ಮಾಡುತ್ತಲೇ ಇರುವನು. ಹಾಗೆ ಅವನು ನನ್ನನ್ನು ಅಷ್ಟು ಪ್ರೀತಿಸುತಲಿದ್ದು, ಈಗ ನನ್ನನ್ನು ಉದ್ಧಾರ ಮಾಡದೇ ಹೋದಲ್ಲಿ, ಅವನು ಖಂಡಿತವಾಗಿಯೂ ನಕ್ಷತ್ರವಾಗಿರಲಾರನು.'' ಎಂದು ಮುಂತಾಗಿ ಚಿಂತಿಸತೊಡಗಿದಳು.

ಕ್ರಮವಾಗಿ ರಾತ್ರಿಯು ಗಂಭೀರವಾಗುತ ಬಂದಿತು. ಶೋಭನೆಯು ನೋಡುತ್ತಿದ್ದ ಹಾಗೆಯೇ ಆಕಾಶದಿಂದ ಒಂದು ನಕ್ಷತ್ರವು ಕಳಚಿಬಿದ್ದಿತು. ಶೋಭನೆಯು ನೋಡಿದಳು. "ನರೇಂದ್ರನೇ ನನ್ನನ್ನು ಉದ್ಧಾರ ಮಾಡಲು ಬರುತ್ತಿರುವನು. ಹಾ ನರೇಂದ್ರ!" ಎಂದು ಗಟ್ಟಿಯಾಗಿ ಅರಚಿಕೊಂಡಳು. ಅಷ್ಟು ಹೊತ್ತಿಗೆ ಸರಿಯಾಗಿ ಉದ್ಯಾನದಿಂದ ಒಂದು ಕಂಠಸ್ವರವು ಕೇಳಿಸಿತು. "ನೀನು ಭಯಪಡಬೇಡ. ಈಶ್ವರನು ನಿನಗೆ ಸಹಾಯಕನು." ಈ ಮಾತನ್ನು ಕೇಳಿ ಶೋಭನೆಯು ಮತ್ತಷ್ಟು ಗಟ್ಟಿಯಾಗಿ "ನರೇಂದ್ರ! ಹಾ ನನ್ನ ಪ್ರಾಣದ ಪದಕವೇ! ಬಂದೆಯಾ?" ಎಂದು ಅರಚಿದಳು. ಉದ್ಯಾನ ಮಧ್ಯದಲ್ಲಿದ್ದ ಆ ಮೂರ್ತಿಯು ಬೇಗಬೇಗನೆ ಶೋಭನೆಯು ಇದ್ದಲ್ಲಿಗೆ ಬರಲಾರಂಭಿಸಿತು. ಆ ಮೂರ್ತಿಯನ್ನು ನೋಡಿ ಶೋಭನೆಯು ಮೂರ್ಛಿತೆಯಾಗಿ ಕೆಳಗೆ ಬಿದ್ದುಬಿಟ್ಟಳು. ಆ ಮೂರ್ತಿಯೇ ನಮ್ಮ ಪೂರ್ವ ಪರಿಚಿತೆಯಾದ ಚತುರೆ. ಅವಳು ಶೋಭನೆಯ ಚೀತ್ಕಾರವನ್ನು ಕೇಳಿ, ಆ ಕೋಣೆಯ ಹತ್ತಿರಕ್ಕೆ ಬಂದು ಬಾಗಿಲನ್ನು ನೂಕಿದಳು. ಒಳಗಡೆ ಚಿಲಕ ಹಾಕಿತ್ತಾದುದರಿಂದ ಬಾಗಿಲನ್ನು ತೆರೆಯಲು ಆಗಲಿಲ್ಲ. ಚತುರೆಯು ಕಿಟಕಿಯ ಕಡೆ ಬಂದು, ಶೋಭನೆಯ ಕೂಗಿಗೆ ಕಾರಣವೇನಿರಬಹುದೆಂದು ನೋಡಿದಳು. ಶೋಭನೆಯು ಜ್ಞಾನ ತಪ್ಪಿ ಭೂಮಿಯ ಮೇಲೆ ಬಿದ್ದಿದ್ದಳು. ಚತುರೆಯು ಕೂಗಿದಳು. ಉತ್ತರವಿಲ್ಲ. ಒಳ್ಳೆಯ ಮಾತುಗಳನ್ನಾಡಿ ನೋಡಿದಳು. ಯಾವುದಕ್ಕೂ ಉತ್ತರವಿಲ್ಲ. ಆಗಲೂ ಶೋಭನೆಗೆ ಜ್ಞಾನ ಬಂದಿರಲಿಲ್ಲ.

ಏನೋ ಪ್ರಮಾದವಾಗಿರಬಹುದೆಂದು ತಿಳಿದು, ಚತುರೆಯು ಗಟ್ಟಿಯಾಗಿ ಕೂಗಿಕೊಂಡಳು. ಆ ಧ್ವನಿಯನ್ನು ಕೇಳಿದೊಡನೆಯೇ ಉಪೇಂದ್ರನ ಕಡೆಯುವರು ಓಡಿಬಂದರು. ಅವರ ಜತೆಯಲ್ಲಿಯೇ ಪಶ್ಚಿಮ ದೇಶೀಯರಂತೆ ಉಡುಪನ್ನು ಹಾಕಿಕೊಂಡಿದ್ದ ಒಬ್ಬ ಯುವಪುರುಷನೂ ಬಂದನು. ಅವನು ಪರಮ ಸುಂದರನಾಗಿದ್ದನು; ಅವನನ್ನು ನೋಡಿದೊಡನೆಯೇ ಎಲ್ಲರ ಮನಸ್ಸೂ ಅವನಲ್ಲಿ ಸಂಕ್ರಾಂತವಾಗಿ ಬಿಡುತ್ತಿತ್ತು. ಎಲ್ಲರೂ ಬಂದು ಬಾಗಿಲನ್ನು ತಟ್ಟಿದರು. ಒಳಗಡೆ ಚಿಲಕ ಹಾಕಿತ್ತಾದುದರಿಂದ ಏನು ಮಾಡಿದರೂ ಬಾಗಿಲು ತೆಗೆಯುವುದು ಅಸಾಧ್ಯವಾಗಿ ಕಂಡುಬಂದಿತು. ಕೊನೆಗೆ ಬಾಗಿಲನ್ನು ಒಡೆಯುವುದೇ ಸರಿಯೆಂದು ಎಲ್ಲರೂ ನಿರ್ಧರಮಾಡಿದರು. ಪಶ್ಚಿಮದೇಶದ ಯೌವನಸ್ಥನು ಎಲ್ಲರನ್ನೂ ಕುರಿತು, "ನೀವು ಸುಮ್ಮನೆ ಗಲಾಟೆಯನ್ನು ಮಾಡದೆ ನಿಮ್ಮ ನಿಮ್ಮ ಕೆಲಸಗಳಿಗೆ ಹೊರಟು ಹೋಗಿ; ನಾನು ಯುಕ್ತಿಯಿಂದ ಬಾಗಿಲನ್ನು ತೆಗೆಯಿಸುವೆನು" ಎಂದನು. ಕೆಲವರು ಈ ಮಾತಿಗೆ ನಕ್ಕರು. ಮತ್ತೆ ಕೆಲವರು ಸದ್ದುಮಾಡದೇ ಹೊರಟು ಹೋದರು.

ಕ್ರಮವಾಗಿ ಜನಗಳು ಕಡಮೆಯಾದರು. ಶೋಭನೆಯ ಅವಸ್ಥೆಯನ್ನು ನೋಡಿ ಚತುರೆಗೆ ಬಲು ಭಯವುಂಟಾಯಿತು. ಕಾರಣವೇನೆಂದರೆ—ಶೋಭನೆಯು ಎರಡು ದಿನಗಳು ಪೂರ್ತಿಯಾಗಿ ಒಳಗೆ ಚಿಲಕ ಹಾಕಿಕೊಂಡು, ಒಂದು ತೊಟ್ಟು, ನೀರನ್ನೂ ಕುಡಿಯದೆ ಶುದ್ಧೋಪವಾಸ ಮಾಡಿದಳು. ಶೋಭನೆಯು ಹೀಗೆ ನಿರಾಹಾರಿಯಾಗಿ ಪ್ರಾಣ ಬಿಡುವಳೆಂದು ಉಪೇಂದ್ರನು ಕೇಳಿದಲ್ಲಿ, ಅವನೂ ಪ್ರಾಣ ಬಿಡುವುದರಲ್ಲಿ ಸಂಶಯವಿಲ್ಲ. ಇದಕ್ಕಾಗಿಯೇ ಚತುರೆಗೆ ತುಂಬಾ ಭಯವುಂಟಾಗಿ, ಹೇಗಾದರೂ ಮಾಡಿ ಬಾಗಿಲನ್ನು ತೆಗೆಯಿಸಬೇಕೆಂದು ಬಹು ಸಾಹಸಪಟ್ಟಿದುದಾಯಿತು. ಚತುರೆಯು ಮತ್ತೆ "ಶೋಭನೆ, ಶೋಭನೆ, ಬಾಗಿಲನ್ನು ತೆಗೆ ಯಾರೋ ನಿನ್ನನ್ನು ಹುಡುಕಿಕೊಂಡು ಬಂದಿರುವರು" ಎಂದು ಕೂಗಿಕೊಂಡಳು.

ಶೋಭನೆಯನ್ನು ಉದ್ಧಾರ ಮಾಡುವುದಕ್ಕಾಗಿ ಇಂದಿರೆಯು ಪಶ್ಚಿಮ ದೇಶದ ಯೌವನಸ್ಥನಂತೆ ವೇಷಹಾಕಿಕೊಂಡು ಬಂದಿರುವಳೆಂದು, ಚತುರೆಗೆ ತಿಳಿಯದು. ಹೇಗಾದರೂ ಮಾಡಿ ಬಾಗಿಲನ್ನು ತೆಗೆಯಿಸುವ ನಿಮಿತ್ತವಾಗಿ ಅವಳು "ಯಾರೋ ಬಂದಿರುವರೆಂದು" ಹೇಳಿದಳು.

ಸ್ವಲ್ಪ ಕಾಲದ ಮೇಲೆ ಶೋಭನೆಗೆ ಜ್ಞಾನೋದಯವಾಯಿತು. ಚತುರೆಯ ಮಾತು ಅವಳ ಕಿವಿಗೆ ಬಿತ್ತು. ಆ ಮಾತು ಅವಳ ಕಿವಿಗೆ ಬೀಳುತಲೆ, ಅವಳಿಗೆ ಚಿಂತೆಗಿಟ್ಟಿತು—ಆ ಯಾವ ನಕ್ಷತ್ರವು ಆಕಾಶದಿಂದ ಬಿದ್ದಿತೋ, ಅದೇ ಮನುಷ್ಯ ರೂಪವನ್ನು ಧಾರಣಮಾಡಿ ತನ್ನನ್ನು ಉದ್ಧಾರ ಮಾಡುವುದಕ್ಕೆ

ಬಂದಿರಬಹುದು. ನಾನು ಯಾರನ್ನು ನೋಡಿ ಮೂರ್ಛಿತೆಯಾದೆನೋ, ಅವನೇ ನನ್ನ ನರೇಂದ್ರನಾಗಿರಬಹುದು. ಆ ನರೇಂದ್ರನೇ ಇಲ್ಲಿಗೆ ಬಂದಿರುವನು" ಎಂದು ಆಲೋಚಿಸಿ ಬೇಗಬೇಗನೆ ಹೋಗಿ ಬಾಗಿಲನ್ನು ತೆಗೆದಳು. ಹಾ ! ಆ ನರೇಂದ್ರನು ಈಗ ಎಲ್ಲಿ?

ಬಾಗಿಲು ತೆರೆದೊಡನೆ, ಚತುರೆಯೂ ಅಪರಿಚಿತನಾದ ಯುವಕನೂ ಒಳಗೆ ಪ್ರವೇಶಮಾಡಿದರು. ಯುವಕನನ್ನು ನೋಡಿದೊಡನೆಯೇ, ಶೋಭನೆಯು ಮತ್ತೆ ಉಪೇಂದ್ರನು ಬಂದುಬಿಟ್ಟನೆಂದು ಭಯದಿಂದ ನೆಲದ ಮೇಲೆ ಬಿದ್ದುಬಿಟ್ಟಳು. ಚತುರೆಗೆ ಕೈಕಾಲುಗಳು ನಡುಗಿದುವು. ಯುವಕನು ಶೋಭನೆಯನ್ನು ತೊಡೆಯ ಮೇಲೆ ಮಲಗಿಸಿಕೊಂಡು ತಲೆಗೆ ನೀರನ್ನು ತಟ್ಟಿ, ಬೀಸಣಿಗೆಯಿಂದ ಬೀಸಲಾರಂಭಿಸಿದನು. ಶೋಭನೆಗೆ ಎಚ್ಚರವಾದುದನ್ನು ಕಂಡು, ಸ್ವಲ್ಪ ನೀರನ್ನೂ ಆಹಾರವನ್ನೂ ತರುವಂತೆ ಚತುರೆಗೆ ಹೇಳಿದನು. ಚತುರೆಯು ತರಲು ಹೊರಟುಹೋದಳು.

ಶೋಭನೆಯು ಮತ್ತೆ ಚೇತರಿಸಿಕೊಂಡು ನೋಡಿದಳು. ಒಬ್ಬ ಯುವಕನ ತೊಡೆಯ ಮೇಲೆ ತಾನು ಮಲಗಿರುವುದನ್ನು ನೋಡಿ ಗಾಬರಿ ಬಿದ್ದು ಎದ್ದು ಹೋಗಲು ಪ್ರಯತ್ನಪಟ್ಟಳು. ಇದನ್ನು ನೋಡಿ ಯುವಕನು, "ಶೋಭನೆ! ನೀನು ಭಯಪಡಬೇಡ. ನಾನು ಗಂಡಸಲ್ಲ. ಚಂದ್ರಮಾಮನು ನಿನ್ನನ್ನು ಉದ್ಧಾರಮಾಡಲೋಸುಗ ನನ್ನನ್ನು ಈ ವೇಷದಲ್ಲಿ ಕಳುಹಿಸಿರುವನು," ಎಂದನು.

ಶೋಭನೆಗೆ ನಂಬಿಕೆಯಾಗದಿರುವುದನ್ನು ನೋಡಿ, ಯುವಕನು ಮತ್ತೆ ಹೇಳತೊಡಗಿದನು. "ಶೋಭನೆ! ನೀನು ಖಂಡಿತವಾಗಿಯೂ ಭಯಪಡಬೇಡ. ನಿನಗೆ ಆಹಾರವನ್ನು ತರುವುದಕ್ಕೋಸ್ಕರ ಚತುರೆಯನ್ನು ನಾನು ಕಳುಹಿಸಿರುವೆನು. ಅವಳು ಬಂದೊಡನೆಯೇ ಕಣ್ಣು ಮುಚ್ಚಿಕೊಂಡುಬಿಡು. ಏನು ಮಾತನ್ನೂ ಆಡಬೇಡ. ಆಮೇಲೆ ಅವಳನ್ನು ಮತ್ತೊಂದು ಕೆಲಸಕ್ಕೆ ದೂರವಾಗಿ ಕಳುಹಿಸಿಬಿಡುವೆನು. ಅನಂತರ ನೀನು ಏನನ್ನು ಮಾಡಬೇಕೋ ಅದನ್ನು ನಾನು ಹೇಳಿಕೊಡುವೆನು. ನಾನು ನಿನ್ನನ್ನು ಜಾಗ್ರತೆಯಾಗಿ ಈ ಕಷ್ಟದಿಂದ ನಿವಾರಿಸುವೆನು."

ಅಷ್ಟುಹೊತ್ತಿಗೆ ಚತುರೆಯು ಆಹಾರವನ್ನು ತೆಗೆದುಕೊಂಡು ಬಂದಳು. ಶೋಭನೆಯು, ಯುವಕನು ಹೇಳಿದಂತೆ ಕಣ್ಣು ಮುಚ್ಚಿದಳು. ಯುವಕನು ಚತುರೆಯನ್ನು ಕುರಿತು "ಚತುರಿಕೆ, ಬೇಗ ಮನೆಗೆ ಹೋಗಿ ನೀರನ್ನು ಕಾಯಿಸಿ ತೆಗೆದುಕೊಂಡು ಬಾ. ಇನ್ನೂ ಸ್ವಲ್ಪ ಹೊತ್ತು ಜ್ಞಾನ ಬರದೇ ಅವಳು ಹೀಗೆಯೇ ಇರುವದಾದರೆ, ಈ ಸಂಗತಿಯನ್ನು ಜಮೀನ್ದಾರನಿಗೆ ತಿಳಿಸಬೇಕಾಗುವುದು." ಎಂದನು.

ಚತುರೆಯು ಜಮೀನ್ದಾರನ ಹೆಸರ ಕೇಳಿ ನಡುಗಿದಳು. "ಈ ವಿಷಯವನ್ನು ಜಮೀನ್ದಾರರಿಗೆ ತಿಳಿಸತಕ್ಕ ಆವಶ್ಯಕತೆಯೇನು ? ಎಂದಳು." ಅದಕ್ಕೆ ಯುವಕನು, ಆಲೋಚಿಸುವವನಂತೆ ನಟಿಸುತ್ತಾ "ಇಲ್ಲ ಅಷ್ಟೇನೂ ಆವಶ್ಯಕ ಕಾಣುವುದಿಲ್ಲ. ನೀನು ಜಾಗ್ರತೆಯಾಗಿ ಬಿಸಿನೀರನ್ನು ತೆಗೆದುಕೊಂಡು ಬಾ. ಸುಮ್ಮನೆ ಗಲಾಟೆ ಮಾಡಿ ಪ್ರಯೋಜನ ತಾನೇ ಏನು ? ಇನ್ನು ತಡಮಾಡದೇ ಹೊರಡು" ಎಂದು ಚತುರೆಯನ್ನು ಕಳುಹಿಸಿಕೊಟ್ಟನು.

ಭಯದಿಂದ ಚತುರೆಗೆ ಏನೂ ತೋಚದೇ, ನೀರು ತರುವುದಕ್ಕೆ ಹೊರಟಳು. ಶೋಭನೆಯು ಮತ್ತೆ ಕಣ್ಣುಬಿಟ್ಟು ನೋಡಿದಳು. ಯುವಕನು ಮಾತನಾಡಿದನು. "ಯಾವ ದಿನ ಈ ನೀಚರು ನಿನ್ನನ್ನು ಕದ್ದು ತಂದು ಬಿಟ್ಟರೋ ಅಂದಿನಿಂದಲೂ ನಾವುಗಳು ನಿನ್ನನ್ನು ಎಲ್ಲೆಲ್ಲಿಯೋ ಹುಡುಕಿದೆವು. ಆ ಪಾಪಿಗಳು ಯಾರ ಕಣ್ಣಿಗೂ ಕಾಣದಿರಲೆಂದು ನಿನ್ನನ್ನು ಈ ಸ್ಥಳದಲ್ಲಿ ನಿರ್ಬಂಧಿಸಿ ನಿನಗೆ ಕೊಡಬಾರದ ಕಷ್ಟವನ್ನು ಕೊಟ್ಟರು. ಇಂದು ಮೊದಲು ನಿನ್ನ ಕಷ್ಟಗಳೆಲ್ಲವೂ ಹೋದುವೆಂದು ತಿಳಿ. ನೀನು ಇನ್ನು ವ್ಯಸನ ಪಡಬೇಡ. ನಿನ್ನ ಯೋಗಕ್ಷೇಮವು ನನಗೆ ಸೇರಿದುದಾಗಿರುವುದು. ಧೈರ್ಯವನ್ನು ತೆಗೆದುಕೊಳ್ಳು ; ಪಾಪಿಯಸಿಯಾದ ಚತುರೆಯು ಬರುವ ಹೊತ್ತಾಯಿತು."

ಯುವಕನ ಮಾತು ಪೂರೈಸುವುದರೊಳಗಾಗಿಯೇ ಚತುರೆಯು ಬಂದುಬಿಟ್ಟಳು. ವೇಷಧಾರಿಯಾದ ಯುವಕನು, ಅವಳನ್ನು ಕೂಗಿ, "ಇವಳು ಸ್ವಲ್ಪ ಚೇತರಿಸಿಕೊಂಡಿರುವಳು. ಇನ್ನು ನಾನು ಇಲ್ಲಿರುವುದು ಸರಿಯಾಗಿ ಕಾಣುವುದಿಲ್ಲ. ಇವಳಿಗೆ ಸ್ವಲ್ಪ ಆಹಾರವನ್ನು ತಿನ್ನಿಸು. ಇವಳನ್ನು ಮಾತ್ರ ಜಾಗರೂಕತೆಯಿಂದ ಕಾಪಾಡಬೇಕು" ಎಂದು ಹೇಳಿ ಅಲ್ಲಿಂದೆದ್ದು ಹೊರಟು ಹೋದನು. ಶೋಭನೆಗೆ ಆಹಾರವನ್ನು ಕೊಟ್ಟ ಮೇಲೆ ಚತುರೆಯೂ ಅಲ್ಲಿಯೇ ಮಲಗಿಕೊಂಡಳು. ಹಾಸಿಗೆಯಲ್ಲಿ ಮಲಗಿಕೊಂಡು ಚತುರೆಯು ತನ್ನ ಮನಸ್ಸಿನಲ್ಲಿಯೇ ಚಿಂತಿಸಿದಳು. "ಈ ಯುವಕನನ್ನು ನಾನು ಎಲ್ಲಿಯೋ ನೋಡಿದಂತಿದೆ. ಆದರೆ ಎಲ್ಲಿ ಎಂಬುದು ಮಾತ್ರ ತಿಳಿಯದವಳಾಗಿದೇನೆ. ಇಂದಿರೆ ಯಾದರೋ ಇವನಂತೆಯೇ ಇರುವಳು. ಅವಳು ಹೆಂಗುಸು. ಯುವಕನು ಹೆಂಗುಸಾಗಿದ್ದರೆ, ಇಂದಿರೆಯೆಂದೇ ಹೇಳಬಹುದು. ಇಂದಿರೆಯಾಗಿದ್ದ ಪಕ್ಷದಲ್ಲಿ ಅವಳನ್ನೂ ಹೀಗೆಯೇ ನಿರ್ಬಂಧದಲ್ಲಿಟ್ಟುಬಿಡುತಿದ್ದೆನು." ಎಂದು ಮುಂತಾಗಿ ಚಿಂತಿಸುತ್ತಲೇ ಚತುರೆಯು ನಿದ್ರೆಮಾಡಲಾರಂಭಿಸಿದಳು. ಶೋಭನೆಯ ಕಣ್ಣುಗಳಿಗೆ ಮಾತ್ರ ನಿದ್ರೆಯು ಹತ್ತಲೇ ಇಲ್ಲ.

## ಇಪ್ಪತ್ತೊಂಬತ್ತನೆಯ ಪರಿಚ್ಛೇದ

ದಿನವು ಕಳೆಯಿತು. ಕ್ರಮವಾಗಿ ರಾತ್ರಿಯಾಗುತ ಬಂದಿತು. ಉಪೇಂದ್ರನು ದಿವಸವೆಲ್ಲಾ ಸುರಾಪಾನ ಮಾಡಿ ಮತ್ತನಾಗಿ ರಾತ್ರಿಯಲ್ಲಿ ಪೈಶಾಚ ವೃತ್ತಿಯನ್ನು ಆಚರಿಸುವುದಕೋಸ್ಕರ ಎದ್ದನು. ಅವನೊಡನೆ ರಾಧಾನಾಥನೂ ಎದ್ದನು. ಇಬ್ಬರೂ ಸ್ವಲ್ಪ ದೂರ ಬಂದ ಮೇಲೆ ಉಪೇಂದ್ರನು "ರಾಧಾನಾಥ! ನೀನು ಮನೆಗೆ ಹಿಂದಿರುಗು, ಇಲ್ಲವೇ ನನ್ನ ಬೈಠಕ್ ಖಾನೆಯಲ್ಲಿಯೇ ಇರು. ನಾನೊಬ್ಬನೇ ಹೋಗಿ ಜಾಗ್ರತೆಯಾಗಿ ಬಂದು ಬಿಡುವೆನು" ಎಂದು ಹೇಳಿದುದನ್ನು ರಾಧಾನಾಥನು ಕೇಳಿ ಸ್ವಲ್ಪ ವಿಷಣ್ಣನಾಗಿ ಹಿಂದಿರುಗಿ ಹೊರಟು ಹೋದನು.

ಉಪೇಂದ್ರನು ಮೆಲ್ಲಮೆಲ್ಲಗೆ ಬರುತ್ತಾ, ಯಾವ ಕೋಣೆಯಲ್ಲಿ ಶೋಭನೆಯೂ ಚತುರೆಯೂ ಇದ್ದರೋ, ಆ ಕೋಣೆಯ ಹತ್ತಿರಕ್ಕೆ ಬಂದು ಬಾಗಿಲನ್ನು ಬಲವಾಗಿ ನೂಕಿದನು. ಆ ನೂಕಿದ ಶಬ್ದವನ್ನು ಶೋಭನೆಯು ಕೇಳಿ ಭಯದಿಂದ ಎದ್ದು ಕುಳಿತಳು. ಚತುರೆಯನ್ನು ಮಾತ್ರ ಎಬ್ಬಿಸಲಿಲ್ಲ. ಆ ಹೊತ್ತಿನಲ್ಲಿ ಚತುರೆಯು ಒಂದು ಅದ್ಭುತವಾದ ಸ್ವಪ್ನವನ್ನು ಕಾಣುತಿದ್ದಳು. ಅದೇನೆಂದರೆ—ಯಾರೋ ಅವಳನ್ನು ಕಟ್ಟಿಹಾಕಿ ಮರಳುತ್ತಿರುವ ಎಣ್ಣೆಯ ಕೊಪ್ಪರಿಗೆಯಲ್ಲಿ ಮುಳುಗಿಸಿದಂತೆಯೂ, ಅವಳ ಶರೀರವೆಲ್ಲವೂ ಸುಟ್ಟುಹೋದಂತೆಯೂ, ಆ ಯಾತನೆಯಿಂದ ಅವಳು ಚೀತ್ಕಾರಮಾಡುತಿದ್ದಂತೆಯೂ, ಆಗ ಉಪೇಂದ್ರನೂ ಮತ್ತಿಬ್ಬರು ಹೆಂಗುಸರೂ ಇದಿರಿನಲ್ಲಿದ್ದರೂ, ಇವಳ ಸಹಾಯಕ್ಕೆ ಯಾರೂ ಬರದೇ ಇರುವಂತೆಯೂ ಸ್ವಪ್ನವಾಯಿತು. ಈ ಸ್ವಪ್ನವನ್ನು ಕಂಡೊಡನೆಯೇ ಚತುರೆಯು ಗಾಬರಿಯಿಂದ "ಚೀ! ಉಪೇಂದ್ರ, ಏನು ಕೆಲಸ ಮಾಡುವೆ! ನಿನ್ನ ಕೆಲಸವನ್ನು ಸುಡು" ಎಂದು ಅರಚಿಕೊಂಡಳು.

ಉಪೇಂದ್ರನು ಈ ಸಮಯದಲ್ಲಿ ಬಾಗಿಲ ಹತ್ತಿರ ನಿಂತಿದ್ದನು. ಈ ಚತುರೆಯ ಕನವರಿಕೆಯು ಅವನ ಕಿವಿಯಲ್ಲಿ ಬಿದ್ದಿತು. ಇದನ್ನು ಕೇಳಿದೊಡನೆಯೇ ಅವನಿಗೆ ಕೋಪವು ಮೇರೆದಪ್ಪಿತು. ಕೋಪದಿಂದ ಬಾಗಿಲನ್ನು ಒದೆದನು. ಈ ಶಬ್ದದಿಂದ ಚತುರೆಗೆ ನಿದ್ರಾಭಂಗವುಂಟಾಯಿತು. ಅವಳು ಕೂಡಲೆ ಎದ್ದು ಬಂದು ಬಾಗಿಲನ್ನು ತೆರೆದಳು. ಬಾಗಿಲು ತೆರೆದೊಡನೆಯೇ ಉಪೇಂದ್ರನು ಅವಳ ತಲೆಯ ಕೂದಲನ್ನು ಹಿಡಿದುಕೊಂಡು ನಾಲ್ಕು ಒದೆ ಒದೆದನು. ಆ ಮೇಲೆ ಅವಳನ್ನು ನೋಡಿ, "ನಿನ್ನಂತಹ ಪಾಪಿಷ್ಠೆಗೆ ಸ್ಥಳಕೊಟ್ಟುದು ನನ್ನ ತಪ್ಪು. ಕಾಲಸರ್ಪವನ್ನು ಮನೆಯಲ್ಲಿಟ್ಟುಕೊಂಡಿರುವೆನೆಂದು ನನಗೆ ತಿಳಿಯದೇ ಹೋಯಿತು. ನೀಚಳೆ! ನನ್ನ ಮನೆಯ ಅನ್ನವನ್ನು ತಿಂದು ಬೆಳೆದು

ನನ್ನನ್ನೇ ನಿಂದಿಸುವೆಯಾ? ಇರಲಿ. ಇಂದು ಮೊದಲು ನಿನ್ನ ಅವಸ್ಥೆಯು ಏನಾಗುವುದೋ ನಾನು ನೋಡಿಕೊಳ್ಳುವೆನು." ಎಂದು ನಿಷ್ಠುರೋಕ್ತಿಗಳನ್ನಾಡಿದನು.

ಚತುರೆಗೆ ಏನೂ ತೋರದೇ ಹೋಯಿತು. ಅವಳು ಏನನ್ನೂ ಮಾತನಾಡದೆ ಸುಮ್ಮನೇ ನಿಂತುಬಿಟ್ಟಳು. ಅವಳು ಮನಸ್ಸಿನಲ್ಲಿಯೇ "ಆ ಯುವಕನೇನಾದರೂ ನನ್ನ ಮೇಲೆ ಕ್ಷುದ್ರವನ್ನು ಹೇಳಿರಬಹುದೆ? ಅಥವಾ ಆ ಯುವಕನ ತೊಡೆಯ ಮೇಲೆ ಶೋಭನೆಯು ಮಲಗಿದ್ದುದನ್ನು ಉಪೇಂದ್ರನೇನಾದರೂ ನೋಡಿ ನನ್ನನ್ನು ಹೀಗೆಲ್ಲ ಬಾಯಿಗೆ ಬಂದ ಹಾಗೆ ಬೈಯುತ್ತಿರುವನೆ? ಮನಸ್ಸು ಬಂದ ಹಾಗೆ ಅನ್ನುವುದಕ್ಕೆ ಏನು ತಪ್ಪು ತಾನೇ ಮಾಡಿರುವೆನು?" ಎಂದು ವ್ಯಸನ ಪಡುತ್ತಾ ಉಪೇಂದ್ರನ ಅಡಿದಾವರೆಗೆ ಎರಗಿ, ಕ್ಷಮಿಸಬೇಕೆಂದು ಪ್ರಾರ್ಥಿಸಿಕೊಂಡಳು. ಕ್ಷಮಿಸುವುದೆಂದರೇನೋ ಅದನ್ನು ಉಪೇಂದ್ರನು ಕಾಣಲೇ ಕಾಣನು. ಗೊತ್ತಿದ್ದರೂ ಅದು ಅವನ ಸ್ವಭಾವವೇ ಆಗಿರಲಿಲ್ಲ. ಯಾತಕ್ಕೆಂದರೆ—ಅವನು ತನ್ನ ಜೀವಮಾನದಲ್ಲಿ ಯಾರನ್ನೂ ಯಾವಾಗಲೂ ಕ್ಷಮಿಸಿದವನೇ ಅಲ್ಲ. ಚತುರೆಯು ಹೀಗೆ ಕೇಳಿದೊಡನೆಯೇ ಉಪೆಂದ್ರನು ಅವಳನ್ನು ಮೈ ಮುರಿಯೆ ಒದ್ದು ಒದ್ದು ಕೆಡಹಿದನು. ಚತುರೆಯು ಈ ಒದೆಗಳನ್ನು ತಡೆಯಲಾರದೇ ಗಟ್ಟಿಯಾಗಿ ಅಳುತ್ತಾ ಹೊರಗೆ ಓಡಿಹೋದಳು.

ಉಪೇಂದ್ರನು ಚತುರೆಯನ್ನು ಹೀಗೆ ಒದೆಯುತ್ತಿದ್ದುದನ್ನು ಶೊಭನೆಯು ನೋಡಿ, ಆತ್ಮಸಂರಕ್ಷಣೆಗೋಸ್ಕರವಾಗಿ ಹಾಸಿಗೆಯ ಕೆಳಗೆ ಮುಚ್ಚಿಟ್ಟಿದ್ದ ಆ ಯೆರಡು ಪದಾರ್ಥಗಳನ್ನೂ ಕೈಯಲ್ಲಿ ತೆಗೆದುಕೊಂಡು ಹಾಸಿಗೆಯ ಮೇಲೆ ಕುಳಿತುಕೊಂಡಳು.

ಚತುರೆಯು ಹೊರಗೆ ಹೊರಟುಹೋದುದನ್ನು ನೋಡಿ ಉಪೇಂದ್ರನು ಕೋಣೆಯೊಳಗೆ ಪ್ರವೇಶಿಸಿ ಶೋಭನೆಯ ಹತ್ತಿರ ಬಂದು ನಿಂತು, ಒಂದೆರಡು ಮಧುರವಾದ ಮಾತುಗಳನ್ನಾಡಿದನು. ಶೋಭನೆಯಲ್ಲಿ ಅವನ ಪ್ರಾರ್ಥನೆಗಳು ಫಲಿಸದಿರುವುದನ್ನು ನೋಡಿ ಬಲಾತ್ಕಾರದಿಂದ ವಶಮಾಡಿಕೊಳ್ಳುವುದಕ್ಕೆ ಯತ್ನಿಸಿದನು. ಶೋಭನೆಗೆ ಯಾವ ಉಪಾಯವೂ ತೋರದೆ, ಹಿಂದಕ್ಕೆ ಸರಿದು ಕೈಯಲ್ಲಿದ್ದ ಮುರುಕು ಗಾಜಿನ ಪಾತ್ರೆಯನ್ನು ವೇಗವಾಗಿ ಉಪೇಂದ್ರನ ಮೇಲೆ ಎಸೆದಳು. ಆ ಪಾತ್ರೆಯು ಉಪೇಂದ್ರನ ತೋಳಿಗೆ ಬಲವಾಗಿ ತಗುಲಿ ಕಿಟಕಿಯಿಂದ ಹೊರಗೆಹೋಗಿ ಬಿದ್ದಿತು.

ಏಟು ತಗುಲಿದೊಡನೆಯೇ ಉಪೇಂದ್ರನು ಕತ್ತೆಯಂತೆ ಅರಚುತ್ತಾ, ಕೋಪಪರವಶನಾಗಿ ಶೋಭನೆಯ ಮೇಲೆ ಬೀಳುವುದಕ್ಕೆ ಹೊದನು. ಇದನ್ನು

ನೋಡಿ ಶೋಭನೆಯು ಮಹಾಕಾಳಿಯ ಅವತಾರವನ್ನು ತಾಳಿದಳು. ಅವಳ ಕಣ್ಣುಗಳಿಂದ ಬೆಂಕಿಯ ಕಿಡಿಗಳೇ ಉದುರುವಂತೆ ತೋರಿತು. ಅವಳು ಗಂಭೀರಸ್ವರದಿಂದ "ಎಲೋ ನೀಚ! ಪ್ರಾಣದ ಮೇಲೆ ಆಸೆಯಿರುವುದಾದರೆ ಅಲ್ಲಿಯೇ ನಿಲ್ಲು. ಒಂದು ಹೆಜ್ಜೆ ಮುಂದೆ ಬರುವುದಾದರೂ ನಿನ್ನನ್ನು ಧ್ವಂಸ ಮಾಡಿಬಿಡುವೆನು. ಪಾಪಿ! ಈಶ್ವರನು ಎಂದಿಗೂ ಪಾಪಕೆಲಸಕ್ಕೆ ಸಹಾಯ ಮಾಡಲಾರನು. ಪತಿವ್ರತೆಯರಿಗೆ ಉಂಟಾಗುವ ಅಪಮಾನವನ್ನು ದೇವತೆಗಳೆಂದಿಗೂ ಸಹಿಸಿಕೊಂಡಿರಲಾರರು. ನಿನ್ನ ಇಷ್ಟು ಅತ್ಯಾಚಾರಗಳಿಗೆ ತಕ್ಕ ಫಲವು ಈಗಲೇ ಸಿದ್ಧವಾಗಿರುವುದೆಂದು ತಿಳಿ. ನಾನು ಅಬಲೆ, ಅಸಹಾಯಳು, ಎಂದು ತಿಳಿದು ನೀನು ಇಷ್ಟು ಗರ್ವದಿಂದ ಮೆರೆಯುವೆಯೋ? ನಿನ್ನ ಅಹಂಕಾರವನ್ನು ಒಂದು ನಿಮಿಷಮಾತ್ರದಲ್ಲಿಯೇ ಸುಟ್ಟು ಬೂದಿಮಾಡಿಬಿಡುವೆನು. ನನ್ನೆದುರಿಗೆ ನಿಲ್ಲದೆ ಬೇಗನೆ ತೊಲಗಿ ಹೋಗು" ಎಂದು ಗರ್ಜಿಸಿದಳು.

ಉಪೇಂದ್ರ—ಧರ್ಮ! ನಿನ್ನ ಧರ್ಮಕರ್ಮಗಳಿಗೆ ಜಲಾಂಜಲಿಯನ್ನು ಕೊಟ್ಟು ಈ ಕಾರ್ಯದಲ್ಲಿ ಪ್ರವೃತ್ತನಾಗಿರುವೆನೆಂದು ನಿನಗೆ ತಿಳಿಯದೋ? ಶೋಭನೆ! ನೀನು ನನಗೆ ಸ್ವಾಧೀನಳಾದಲ್ಲಿ ಧರ್ಮವನ್ನು ಪಾಲನೆ ಮಾಡುವುದು ಉಚಿತವೋ ಅನುಚಿತವೋ ಎಂಬುದನ್ನು ಆಮೇಲೆ ಆಲೋಚಿಸುವೆನು.

ಶೋಭನೆ—ನಿನ್ನಂತಹ ಚಂಡಾಲನು ನನ್ನನ್ನು ಸ್ವಾಧೀನಪಡಿಸಿಕೊಳ್ಳಬಲ್ಲನೆಂಬುದನ್ನು ನಿನ್ನ ಸ್ವಪ್ನದಲ್ಲಿಯೂ ನೆನೆಸಬೇಡ.

ಉಪೇಂದ್ರ—ನಿನ್ನನ್ನು ಬಲಾತ್ಕರಿಸಿ ಸ್ವಾಧೀನ ಮಾಡಿಕೊಳ್ಳುವೆನು.

ಶೋಭನೆ—ನಿನ್ನ ಹಣೆಯಲ್ಲಿಯೇ ಬರೆದಿಲ್ಲ. ನಾನು ನಿಜವಾಗಿಯೂ ಪತಿವ್ರತೆಯ ಹೊಟ್ಟೆಯಲ್ಲಿಯೇ ಹುಟ್ಟಿದ್ದ ಪಕ್ಷದಲ್ಲಿ, ನರೇಂದ್ರನ ಚರಣದಲ್ಲಿ ನನಗೆ ನಿಶ್ಚಂಚಲವಾದ ಭಕ್ತಿಯು ಇರುವ ಪಕ್ಷದಲ್ಲಿ, ನನ್ನ ಧರ್ಮವೇ ನನ್ನನ್ನು ಎಲ್ಲಾ ಕಷ್ಟಗಳಿಂದಲೂ ಕಾಪಾಡುವುದು.

ಉಪೇಂದ್ರ—(ನಕ್ಕು) ನಿನ್ನ ನರೇಂದ್ರನು ವಿಶಾಲಾಕ್ಷಿಯಲ್ಲಿರುವ ಜಲಚರಗಳ ಹೊಟ್ಟೆಯಲ್ಲಿ ಜೀರ್ಣಿಸಿರುವನು. ಅವನನ್ನು ಕಟ್ಟಿಕೊಂಡು ಪ್ರಯೋಜನವಿಲ್ಲ. ಅವನ ಹೆಸರನ್ನು ಮರೆತುಬಿಡು, ಎಂದು ಹೇಳಿದನು.

ಶೋಭನೆ—ನರೇಂದ್ರನು ಬದುಕಿಯೇ ಇರಲಿ, ಅಥವಾ ಸತ್ತೇಹೋಗಿರಲಿ, ಅವನೇ ನನಗೆ ಸ್ವಾಮಿ. ಅವನೇ ನನಗೆ ಪ್ರಾಣೇಶ್ವರ. ನಾನು ಅವನ ಪಾದಪ್ರಾಂತದಲ್ಲಿ ನನ್ನ ತನುಧನಮನಗಳನ್ನು ಅರ್ಪಿಸಿರುವೆನು. ಆದುದ

ರಿಂದ ನಾನು ಬದುಕಿದರೂ ಸತ್ತರೂ ಯಾವಾಗಲೂ ಅವನವಳು. ನರೇಂದ್ರನು ಒಂದು ವೇಳೆ ಸತ್ತುಹೋಗಿದ್ದರೂ--ಎಂದು ಹೇಳುವುದರೊಳಗಾಗಿಯೇ ಅವಳ ಕಂಠವು ರುದ್ಧವಾಗಿಹೋಯಿತು. ಕಣ್ಣುಗಳಿಂದ ದರದರನೆ ನೀರು ಸುರಿಯ ಲಾರಂಭಿಸಿತು. ಮತ್ತೆ ಶೋಭನೆಯು ಚೇತರಿಸಿಕೊಂಡು, "ನಾನು ಎಂತಹ ಕೆಲಸಮಾಡುತಲಿರುವೆನು! ಇದು ಅಳುವುದಕ್ಕೆ ಕಾಲವಲ್ಲ. ಬಂದಿರುವ ವಿಪತ್ತನ್ನು ಹೋಗಲಾಡಿಸುವುದಕ್ಕೆ ಯತ್ನಮಾಡಬೇಕಾದುದು ಧರ್ಮ," ಎಂದು ನಿರ್ಧರಮಾಡಿಕೊಂಡು, "ಹಾಗಾಗಿದ್ದರೂ ನಾನು ಅವನವಳು" ಎಂದಳು.

ಉಪೇಂದ್ರನಿಗೂ, ಶೋಭನೆಗೂ ಈ ರೀತಿಯಾಗಿ ಮಾತುಕತೆಗಳು ನಡೆ ಯುತ್ತಿರುವಷ್ಟರಲ್ಲಿಯೇ ಆ ಕೋಣೆಯ ಬಾಗಿಲು ತೆರೆಯಲ್ಪಟ್ಟಿತು. ಶೋಭನೆಯು ಆಕಡೆ ನೋಡಿದಳು. 'ಈ ವಿಪತ್ತಿನಿಂದ ತನ್ನನ್ನು ಯಾರಾದರೂ ಉದ್ಧಾರ ಮಾಡುವುದಕ್ಕೆ ಬರುತ್ತಿರಬಹುದು. ಹಾಗೆ ಯಾರೂ ಬಾರದ ಪಕ್ಷದಲ್ಲಿ ಆತ್ಮ ಹತ್ಯೆಯನ್ನು ಮಾಡಿಕೊಳ್ಳುವುದೇ ಸರಿ' ಎಂದು ಆಲೋಚಿಸುತ್ತ ಅತ್ತ ಕಡೆ ನೋಡಿದಳು. ಹಾಗೆಯೇ ನೋಡುತ್ತ ಮತ್ತೂ ಆಲೋಚಿಸಿದಳು. "ನನಗೆ ಯಾರೋ ಭರವಸೆಯನ್ನು ಕೊಟ್ಟಿರುವರು. ನರೇಂದ್ರನ ವಿಷಯವನ್ನು ಕೇಳಿದ ಹೊರತು ಪ್ರಾಣಬಿಡುವುದಿಲ್ಲ. ಯಾವನಿಗೋಸ್ಕರವಾಗಿಯೇ ಈ ನನ್ನ ಶರೀರವು ಪಡಬಾರದ ಕಷ್ಟವನ್ನು ಅನುಭವಿಸುತಲಿರುವುದೋ ಅಂತಹ ಜೀವಿತೇಶನಾದ ನರೇಂದ್ರನು ಬದುಕಿರುವನೋ, ಸತ್ತಿರುವನೋ, ಅದಾವುದನ್ನೂ ತಿಳಿದು ಕೊಳ್ಳದೇ ಸಾಯುವುದು ಧರ್ಮವಾಗಿ ಕಾಣುವುದಿಲ್ಲ."

ಶೋಭನೆಯು ನೋಡುತಿದ್ದ ಹಾಗೆಯೇ, ಕೊಂಚ ಕಾಲಕ್ಕೆ ಮುಂಚೆ ತನ್ನನ್ನು ಯಾವ ಯುವಕನು ತೊಡೆಯ ಮೇಲೆ ಮಲಗಿಸಿಕೊಂಡು ಶುಶ್ರೂಷೆ ಯನ್ನು ಮಾಡಿದನೋ, ಅದೇ ಯುವಕನು ಕೋಣೆಯನ್ನು ಮೆಲ್ಲಮೆಲ್ಲಗೆ ಪ್ರವೇಶಿಸಿ ಉಪೇಂದ್ರನ ಹಿಂದುಗಡೆ ಬಂದು ನಿಂತನು. ಉಪೇಂದ್ರನಿಗೆ ಇದಾ ವುದೂ ಗೊತ್ತಾಗಲಿಲ್ಲ. ಉಪೇಂದ್ರನು, ಶೋಭನೆಯ ಮಾತನ್ನು ಕಿವಿಗೆ ಹಾಕಿ ಕೊಳ್ಳದೆ, ಅವಳನ್ನು ಮುಟ್ಟುವುದಕ್ಕೆ ಮುಂದೆ ಸರಿದನು. ಶೋಭನೆಯು ಮತ್ತಾವ ಮಾತನ್ನೂ ಆಡದೆ ಸ್ವಲ್ಪ ಹಿಂದಾದಳು. ಉಪೇಂದ್ರನು ಒಂದೇ ಪೆಟ್ಟಿಗೆ ಅವಳ ಮೇಲೆ ಹಾರಿ ಅವಳನ್ನು ಹಿಡಿದುಕೊಳ್ಳುವುದರಲ್ಲಿದ್ದನು. ಅಷ್ಟ ರಲ್ಲಿಯೇ ಹಿಂದೆ ನಿಂತಿದ್ದ ಯುವಕನು ಉಪೇಂದ್ರನ ಬೆನ್ನಿನ ಮೇಲೆ ಬಲವಾಗಿ ತನ್ನ ಚೂರಿಯಿಂದ ಚುಚ್ಚಿದನು. ಉಪೇಂದ್ರನು ದಾರುಣವಾದ ಚೀತ್ಕಾರ ವನ್ನು ಮಾಡುತ್ತ ಭೂಮಿಯ ಮೇಲೆ ಬಿದ್ದುಬಿಟ್ಟನು.

ಆಮೇಲೆ ವೇಷಧಾರಿಯಾದ ಯುವಕನು ಶೋಭನೆಯನ್ನು ಕುರಿತು, "ನೀನು ಜಾಗ್ರತೆಯಾಗಿ ಈ ಮನೆಯನ್ನು ಬಿಟ್ಟು ಹೊರಡು. ಹೊರಗೆ ಉಪೇಂದ್ರನ ದಾಸದಾಸಿಯರಾರೂ ಇರುವುದಿಲ್ಲ. ಮನೆಯ ಮುಂದುಗಡೆಯೇ ಒಬ್ಬ ಪುರುಷನು ನಿನ್ನನ್ನು ಕಾಣಿಸಿಕೊಳ್ಳುವನು. ಶತ್ರುಪಕ್ಷದವನೆಂದು ಹೆದರ ಬೇಡ. ಅವನನ್ನೇ ನೀನು ಹಿಂಬಾಲಿಸಿದರೆ ಅವನು ನಿನ್ನನ್ನು ಚಂದ್ರಮಾಮನ ಹತ್ತಿರಕ್ಕೆ ಕರೆದುಕೊಂಡುಹೋಗಿ ಬಿಡುವನು. ಬೇರೇ ವಿಧವಾಗಿ ಆಲೋಚಿಸದೇ ಕೂಡಲೇ ಇಲ್ಲಿಂದ ಹೊರಡು" ಎಂದು ಹೇಳಿದನು.

ಶೋಭನೆ—ನಾನು ಹೊರಟುಹೋದರೆ ನಿನಗೆ ಕಷ್ಟವಾಗುವುದಿಲ್ಲವೆ? ನೀನೊಬ್ಬಳೇ ಇಲ್ಲಿರುವುದನ್ನು ಕಂಡರೆ, ಉಪೇಂದ್ರನ ಕಡೆಯವರು ನಿನ್ನನ್ನು ಸುಮ್ಮನೆ ಬಿಡುವರೆ? ಇದೂ ಅಲ್ಲದೆ ಉಪೇಂದ್ರನು ನಿನ್ನನ್ನು ನೋಡಿದರೆ, ಅತ್ಯಾಚಾರ ಮಾಡದಿರುವನೆ? ನಾನೊಬ್ಬಳೇ ಹೋಗಲಾರೆನು.

ಇಂದಿರಾ—ನೀನೇತಕ್ಕೆ ಭಯಪಡುವೆ? ನನಗೆ ಯಾವ ವಿಧವಾದ ತೊಂದರೆಯೂ ಬರದಂತೆ ನಾನು ಮಾಡಿಕೊಂಡಿರುವೆನು.

ಎಂದು ರಕ್ತದಿಂದ ತೋಯಿಸಲ್ಪಟ್ಟಿದ್ದ ತನ್ನ ಚೂರಿಯನ್ನು ಶೋಭನೆಗೆ ತೋರಿಸಿದಳು.

ಶೋಭನೆಯು ಯಾವ ಮಾತನ್ನೂ ಆಡದೆ ಇಂದಿರೆಯ ಇಷ್ಟಾನುಸಾರ ವಾಗಿ ನಡೆದುಕೊಂಡಳು. ಶೋಭನೆಯು ಹೊರಟುಹೋದೊಡನೆ ಇಂದಿರೆಯು ತನ್ನ ಯುವಕನ ವೇಷವನ್ನು ತೆಗೆದುಹಾಕಿ, ಅಲ್ಲಿಯೇ ನಿಂತಿದ್ದಳು. ಉಪೇಂ ದ್ರನ ಆರ್ತಸ್ವರವನ್ನು ಕೇಳಿದ ಕೂಡಲೇ, ಕೆಲವು ದಾಸದಾಸಿಯರು ಓಡಿ ಬಂದರು. ಅಲ್ಲಿಯೇ ನಿಂತಿದ್ದ ಹೆಂಗುಸನ್ನು, ಚೀತ್ಕಾರಕ್ಕೆ ಕಾರಣವೇನೆಂದು ಕೇಳಿದರು. ಅದಕ್ಕೆ ಇಂದಿರಯು, "ಉಪೇಂದ್ರನು ಮಿತಿಮೀರಿ ಮದ್ಯವನ್ನು ಪಾನಮಾಡಿಬಿಟ್ಟನು. ಅದಕ್ಕಾಗಿಯೇ ಚೀತ್ಕಾರ ಮಾಡತೊಡಗಿದನು. ಅವನಿಗೆ ಸಮಾಧಾನಮಾಡಿ ಮಲಗಿಸಿರುವೆನು, ನಿಮ್ಮಿಂದೇನೂ ಇಲ್ಲಿ ಕೆಲಸವಿರಲಾರದು. ನೀವು ಇಲ್ಲಿಯೇ ಬಹಳ ಹೊತ್ತು ಇರುವುದಾದರೆ ಅವನಿಗೆ ನಿದ್ರಾಭಂಗವಾಗುವ ಸಂಭವವುಂಟು. ಆದುದರಿಂದ ನೀವು ಇಲ್ಲಿ ನಿಲ್ಲದೇ ಹೊರಟುಹೋಗಿರಿ, ಬೇಕಾ ದಾಗ ನಾನು ನಿಮ್ಮನ್ನು ಕರೆಯಿಸುವೆನು." ಎಂದು ಹೇಳಿದಳು.

ಭೃತ್ಯರೆಲ್ಲರೂ ಯಥಾಯಥಾ ಹೊರಟುಹೋದರು. ಇಂದಿರೆಯು ಮತ್ತೆ ತನ್ನ ಪೂರ್ವವೇಷವನ್ನು ಧಾರಣಮಾಡಿ, ಭೂತಲಶಾಯಿಯಾಗಿದ್ದ ಉಪೇಂದ್ರನನ್ನು ನೋಡಿ, "ಚಂಡಾಲ! ಜಗತ್ತಿನಲ್ಲಿ ಧರ್ಮವು ಇರುವುದು. ಇನ್ನೂ ಸಂಪೂರ್ಣವಾಗಿ ಹೋಗಿಲ್ಲ. ಪತಿವ್ರತೆಯ ಪಾತಿವ್ರತ್ಯವನ್ನು ಭಂಗ

ಪಡಿಸಬೇಕೆನ್ನುವವರಿಗೆಲ್ಲಾ ಇದೇ ಗತಿ!" ಎಂದು ಹೇಳುತ್ತಾ, ಆ ಕೋಣೆಯ ದ್ವಾರವನ್ನು ಹಾಕಿಕೊಂಡು ಹೊರಟುಹೋದಳು.

ಇಂದಿರೆಯು ಹೊರಟುಹೋದಳು. ಉಪೇಂದ್ರನ ಶರೀರದಿಂದ ರಕ್ತವು ಸೋರಿ ಭೂಮಿಯನ್ನು ನನೆಯಿಸುತಿದ್ದಿತು. ಉಪೇಂದ್ರನಿಗೆ ಏಳುವುದಕ್ಕೂ ಮಾತನಾಡುವುದಕ್ಕೂ ತ್ರಾಣವೇ ಇರಲಿಲ್ಲ. ಜ್ಞಾನಾಜ್ಞಾನದಿಂದ ಆಲೋಚಿಸ ಲಾರಂಭಿಸಿದನು.—"ಯಾರೋ ನನ್ನನ್ನು ಆನಂದಮಯವಾದ ಸ್ಥಾನದಿಂದ, ಆಳವಾಗಿಯೂ, ಅಂಧಕಾರಮಯವಾಗಿಯೂ ಇರುವ ಒಂದು ಕೂಪದಲ್ಲಿ ತಳ್ಳಿ ಬಿಟ್ಟಿರುವರು. ಇದು ನರಕ ಕೂಪವೇ ಸರಿ. ದುರ್ಗಂಧವಾದರೋ ಸಹಿಸ ಲಸಾಧ್ಯ. ಅಗ್ನಿದೇವನಾದರೂ ತನ್ನ ಯೌವನಾವಸ್ಥೆಯಿಂದ ಪ್ರವಹಿಸುತ್ತಲಿರು ವನು. ಆ ಪ್ರವಾಹದಲ್ಲಿ ಸರ್ವಾಂಗ ವಿಷಪೂರ್ಣವಾದ ಸರ್ಪಗಳೂ, ವೃಶ್ಚಿಕ ಗಳೂ, ಇತರ ದುಷ್ಟಜಂತುಗಳೂ, ಗಜಿಬಿಜಿ ಸರಿದಾಡುತಲಿರುವುವು. ನಾನು ಕೂಪದಲ್ಲಿ ಬಿದ್ದೊಡನೆಯೇ ಎಲ್ಲವೂ ನನ್ನನ್ನು ಕಚ್ಚಲಾರಂಭಿಸಿದುವು. ಲಕ್ಷೋಪಲಕ್ಷ ಕ್ರಿಮಿಕೀಟಗಳು ನನ್ನ ಕಣ್ಣು, ಕಿವಿ, ಮೂಗು, ಬಾಯಿ ಮುಂತಾ ದುವುಗಳನ್ನು ಪ್ರವೇಶಿಸಿ ಒಳಗೇ ಕೊರೆಯುತ್ತಿರುವುವು. ಅಗ್ನಿಯಾದರೋ ನನ್ನ ಶರೀರವನ್ನು ದಗ್ಧಮಾಡಿಬಿಡುತಲಿರುವನು. ಇಂತಹ ಸಮಯದಲ್ಲಿ ಅಗ್ನಿಯ ಪ್ರವಾಹದಲ್ಲಿ ತೇಲಿ ಮುಳುಗಿಹೋಗುತ್ತಿರುವವನನ್ನು ಯಾರೂ ಕಾಪಾಡುವ ರಿಲ್ಲವೆ?"

ಆ ಅಗ್ನಿಯ ಪ್ರವಾಹದಲ್ಲಿ ಉಪೇಂದ್ರನು ತೇಲಿಹೋಗುತಲಿದ್ದನು. ಅವನು, ತನ್ನನ್ನು ಉದ್ಧಾರಮಾಡುವುದಕ್ಕೆ ಯಾರೂ ಬಾರದಿರುವುದನ್ನು ನೋಡಿ ಕಿಡಿಕಿಡಿಯಾದನು. ಅವನು ತೇಲಿಹೋಗುತ್ತಾ ಹೋಗುತ್ತಾ, ಕೆಲವು ದೇವ ಕನ್ನೆಯರು ಮಧುರವಾಗಿ ಗಾನಮಾಡಿಕೊಂಡು ಹೋಗುತಿದ್ದುದನ್ನು ನೋಡಿ ದನು. ಕಾತರನಾದ ಉಪೇಂದ್ರನು, ತನ್ನನ್ನ ಉದ್ಧಾರಮಾಡುವಂತೆ ಅವರನ್ನು ಬೇಡಿಕೊಂಡನು. ಅವರು ನಗುತ "ನಿನ್ನಂತಹ ಘಾತುಕನಿಗೆ ರಕ್ಷಣೆಯನ್ನುಂಟು ಮಾಡುವುದರಿಂದ ಪಾಪಕ್ಕೆ ಆಸ್ಪದಕೊಟ್ಟಹಾಗಾಗುವುದು. ಧರ್ಮದ ಗತಿಯು ಅಪ್ರತಿಹತವಾಗಿರಲೆಂಬುದಕ್ಕೋಸ್ಕರವೇ ಈಶ್ವರನು ನಿನ್ನಂತಹ ನೀಚರನ್ನು ಇಂತಹ ಸ್ಥಳದಲ್ಲಿ ಕೆಡಹಿರುವನು. ನೀನು ಹಿಂದೆ ಮಾಡಿದ ಪಾಪಕರ್ಮಗ ಳೆಲ್ಲವನ್ನೂ ಸ್ಮರಿಸಿಕೊಂಡು ಪ್ರಕೃತಯಾತನೆಯನ್ನು ಸಹಿಸಿಕೊ" ಎಂದುತ್ತರ ಕೊಟ್ಟರು.

ಉಪೇಂದ್ರನು ನಿರುಪಾಯನಾಗಿ ತೇಲಿಹೋಗುತಲಿದ್ದನು. ಹೀಗೆಯೇ ಹೋಗುತ್ತಿರುವಾಗ ಸ್ವಲ್ಪ ದೂರದಲ್ಲಿಯೇ, ನದಿಯ ಪಕ್ಕದಲ್ಲಿ ಒಬ್ಬ ಅರ್ಧ ದಗ್ಧನಾದ ಪುರುಷನು ನಿಂತುಕೊಂಡು ಏನೋ ನೋಡುತಿದ್ದನು. ಉಪೇಂದ್ರನು

ಅವನನ್ನು ಗುರುತಿಸಿದನು. ಆ ಕೂಡಲೆ ಅವನನ್ನು ನೋಡಿ, "ಹಾ ತಂದೆಯೆ! ನನ್ನನ್ನು ರಕ್ಷಿಸು, ನನ್ನನ್ನು ರಕ್ಷಿಸು," ಎಂದು ದೈನ್ಯದಿಂದ ಬೇಡಿಕೊಂಡನು. ನಿಂತಿದ್ದ ಮನುಷ್ಯನು, ಈ ಹೃದಯಬೇಧಿಯಾದ ಆರ್ತಸ್ವರವನ್ನು ಕೇಳಿದ ಕೂಡಲೇ, ಆ ಮನುಷ್ಯನ ಕಡೆ ತಿರುಗಿ "ಎಲೊ ನೀಚನೆ! ಯಾವ ಪುತ್ರನಿಂದ ವಂಶಕ್ಕೆ ದುಷ್ಕಲಂಕವೇರ್ಪಟ್ಟಿತೋ, ಯಾವನ ಪಾಪಗಳಿಂದ ಪಿತೃಗಳೆಲ್ಲರೂ ನರಕಭೂಯಿಷ್ಠರಾದರೋ, ಯಾವನ ಅಧರ್ಮದಿಂದ ಪೂರ್ವಪುರುಷರ ಪುಣ್ಯಗಳೆಲ್ಲವೂ ನಾಶವಾಗಿ ಹೋದುವೋ, ಯಾವನು ಸತಿಯ ಸತೀತ್ವವನ್ನು ನಾಶ ಮಾಡಲು ಹಿಂಜರಿಯಲಿಲ್ಲವೋ, ಯಾವನಿಂದ ಪೃಥಿವಿಯಲ್ಲಿ ಪಾಪವು ಪರಿವರ್ಧಿತವಾಗುತಲಿದ್ದಿತೋ, ಅಂತಹ ಸರ್ವನಾಶಕರನಾದ, ಕುಲಾಂಗಾರನಾದ ಪಾಪಿಗೆ ಉದ್ಧಾರವು ಎಲ್ಲಿಂದ ಬಂದೀತು? ನನ್ನಿಂದ ನಿನಗೇನೂ ಉಪಕಾರವಾಗಲಾರದೆಂದು ತಿಳಿ," ಎಂದು ಹೇಳಿಬಿಟ್ಟನು.

ಉಪೇಂದ್ರನು ತೇಲಿಹೋಗುತಲಿದ್ದನು. ಅವನಿಗೆ ಯಾರಿಂದಲೂ ಉದ್ಧಾರವಾಗುವ ಭರವಸೆಯೇ ತಪ್ಪಿಹೋಯಿತು. ಅನನ್ಯಗತಿಕನಾಗಿ ಅಗ್ನಿಯ ಪ್ರವಾಹದಲ್ಲಿ ತೇಲುತ್ತಲೂ ಮುಳುಗುತ್ತಲೂ, ಸಂಕಟಪಡುತ್ತಾ ಹೋಗುತಿದ್ದನು; ಮೃತ್ಯುವು ತನ್ನ ಭಯಂಕರವಾದ ಬಾಯನ್ನು ತೆರೆದುಕೊಂಡು, ಉಪೇಂದ್ರನನ್ನು ನುಂಗಿಬಿಡುವುದಕ್ಕೆ ಸಮಯವನ್ನು ನೋಡುತಿದ್ದಳು. ಅಷ್ಟು ಹೊತ್ತಿಗೆ ಸರಿಯಾಗಿ ಬಹಳವಾಗಿ ಪೆಟ್ಟುತಿಂದ ಚತುರೆಯೂ, ಕೆಲವು ಜನ ರಾಜಪುರುಷರೂ ಅಲ್ಲಿಗೆ ಬಂದು ಸೇರಿದರು. ಸ್ವಲ್ಪ ಹೊತ್ತಿನಲ್ಲಿಯೇ ಚಂದ್ರಮಾಮನೂ ಅಲ್ಲಿಗೆ ಬಂದನು. ಅಷ್ಟು ಹೊತ್ತಿಗೆ ಉಪೇಂದ್ರನು ಮೃತಪ್ರಾಯನಾಗಿದ್ದನು. ರಾಜಪುರುಷನು ಉಪೇಂದ್ರನನ್ನು ಏನೇನೋ ಕೇಳಿದನು. ಏನೊಂದುತ್ತರವೂ ಬಾರದಿರುವುದನ್ನು ನೋಡಿ ಅವನು ಚತುರೆಯನ್ನು ಕರದುಕೊಂಡು ಹೊರಗೆ ಹೋದನು. ಚಂದ್ರಮಾಮನೊಬ್ಬನೇ ಅಲ್ಲಿ ನಿಂತಿದ್ದನು. ಚಂದ್ರಮಾಮನು, ಭೃತ್ಯರನ್ನು ನೋಡಿ ಉಪೇಂದ್ರನಿಗೆ ಕುಡಿಯುವುದಕ್ಕೆ ನೀರನ್ನು ತಂದು ಕೊಡಿರಿ, ಎಂದು ಹೇಳಿದನು. ನೀರು ತಂದುದಾಯಿತು. ಚಂದ್ರಮಾಮನು ಉಪೇಂದ್ರನ ಮುಖದಲ್ಲಿ ಸ್ವಲ್ಪಸ್ವಲ್ಪವಾಗಿ ನೀರನ್ನು ಹಾಕುತಲಿದ್ದನು. ನೀರೂ ಅವನ ಗಂಟಲಿನಲ್ಲಿ ಇಳಿಯದೇ ಹೋಯಿತು. ನೋಡುತಿದ್ದ ಹಾಗೆಯೇ ಉಪೇಂದ್ರನ ಕಣ್ಣುಗಳು ಕಾಂತಿ ಹೀನವಾದುವು. ಕಣ್ಣುಗುಡ್ಡೆಗಳು ಸ್ಥಿರಭಾವವನ್ನು ವಹಿಸಿದುವು. ಉಪೇಂದ್ರನು ಒಂದೆರಡಾವೃತ್ತಿ ಬಾಯನ್ನು ತೆರೆದು, ಇಹಲೋಕ ವ್ಯಾಪಾರದಿಂದ ಮುಕ್ತನಾದನು. ಪೃಥ್ವಿಯ ಭಾರವು ಸ್ವಲ್ಪ ಮಟ್ಟಿಗೆ ಇಳಿಸಿದಂತಾಯಿತು. ಅನಂತರ ಚಂದ್ರಮಾಮನು ಅಲ್ಲಿಂದೆದ್ದು ಎಲ್ಲಿಯೋ ಹೊರಟುಹೋದನು.

---

## ಮೂವತ್ತನೆಯ ಪರಿಚ್ಛೇದ

ಅಡಿಗೆಮಾಡಿದನಂತರದಲ್ಲಿ, ನರೇಂದ್ರನಾಥನು ಊಟಮಾಡಿ, ಎಲ್ಲರಿಗೂ ಅನ್ನವನ್ನು ಬಡ್ಡಿಸಿದನು. ಎಲ್ಲರಿಗೂ ಊಟವಾದನಂತರದಲ್ಲಿ ಚಂದ್ರಮಾಮನು ಕಡೆಯವರು ಒಂದು ಕಡೆ ಕುಳಿತುಕೊಂಡು "ಸನ್ಯಾಸಿನಿಯು ಒಬ್ಬ ಹೆಣ್ಣು ಹುಡುಗಿಯನ್ನು ಕರೆದುಕೊಂಡು ಬಂದಿರುವಳು. ನಮ್ಮ ಯಜಮಾನನು ಅವಳನ್ನು ಮದುವೆಯಾಗಬಹುದು" ಎಂದು ಮಾತನಾಡಿಕೊಳ್ಳುತಿದ್ದರು. ನರೇಂದ್ರನು ಇದೆಲ್ಲವನ್ನೂ ಕೇಳುತಿದ್ದರೂ, ಅವನಿಗೆ ಯಾವುದೂ ಗೊತ್ತಾಗಲಿಲ್ಲ. "ಉಪೇಂದ್ರನು ಒಬ್ಬ ರಮಣಿಯನ್ನು ಅಪಹರಿಸಿಕೊಂಡು ಬಂದಿರುವನು. ಅವಳ ಪೂರ್ಣಯೌವನ ಸಂಪನ್ನಳೂ ಮತ್ತೂ ದೇವಕನ್ಯೆಯಂತೆ ಲಾವಣ್ಯಮಯಿ" ಎಂಬ ವಿಷಯಮಾತ್ರ ನರೇಂದ್ರನಿಗೆ ಗೊತ್ತಿದ್ದಿತು.

ಕೆಲವು ಕಾಲದ ಮೇಲೆ ಇಂದಿರೆಯೂ, ಚಂದ್ರಮಾಮನೂ ಅಲ್ಲಿಗೆ ಬಂದು ಸೇರಿದರು. ಶೋಭನೆಯೂ ಅಲ್ಲಿಗೆ ತರಲ್ಪಟ್ಟಳು. ಶೋಭನೆಗೆ ಇನ್ನೂ ಆಹಾರವಾಗಿರಲಿಲ್ಲವೆಂದು ತಿಳಿದು, ಚಂದ್ರಮಾಮನು ಅವಳಿಗೆ ಆಹಾರ ಕೊಡಲು ಆದೇಶ ಮಾಡಿದನು. ಎಲ್ಲವೂ ಸಿದ್ಧವಾಯಿತು. ನರೇಂದ್ರನು, ಆಹಾರ ಪದಾರ್ಥಗಳನ್ನು ಪಾತ್ರೆಯಲ್ಲಿಟ್ಟುಕೊಂಡು ಬಡ್ಡಿಸುವುದಕ್ಕೆ ಹೋದನು. ಶೋಭನೆಯನ್ನು ನೋಡಿದೊಡನೆಯೇ, ಅವನ ಕೈಯಿಂದ ಪಾತ್ರೆಗಳು ಜಾರಿಬಿದ್ದುವು. ಪಾತ್ರೆಯು ಬಿದ್ದಶಬ್ದದಿಂದ ಶೋಭನೆಯು ಚಕಿತಳಾಗಿ, ತನ್ನ ಮುಖವನ್ನು ಮೇಲಕ್ಕೆ ಎತ್ತಿದಳು. ನರೇಂದ್ರನು ನಿಂತಿದ್ದನು. ಇಬ್ಬರೂ ನಿರ್ವಾಕ್, ನಿಷ್ಪಂದ. ಯಾರಿಗೂ ಮಾತನಾಡುವುದಕ್ಕೆ ಶಕ್ತಿಯೇ ಇರಲಿಲ್ಲ. "ಶೋಭನೆಯ ಆಹಾರಪದಾರ್ಥವೆಲ್ಲವೂ ನಷ್ಟವಾಗಿ ಹೋಯಿತು" ಎಂದು ಯಾರೋ ಚಂದ್ರಮಾಮನೊಡನೆ ತಿಳಿಸಿದರು. ಚಂದ್ರಮಾಮನಿಗೆ ಕೋಪವುಂಟಾಗಿ, ಶೋಭನೆಯಿದ್ದಲ್ಲಿಗೆ ಹೋಗಿ ನೋಡಿದನು. ಅಲ್ಲಿ ನರೇಂದ್ರನಾಥನು ನಿಂತಿದ್ದುದನ್ನು ನೋಡಿ ಏನೂ ಮಾತನಾಡದೇ ಹೊರಗೆ ಹೋಗಿಬಿಟ್ಟನು.

ಚಂದ್ರಮಾಮನು ಹೊರಟುಹೋದೊಡನೆಯೇ ಇಂದಿರೆಯು ಅಲ್ಲಿಗೆ ಬಂದಳು. ಇವಳಿಗೆ ಅಲ್ಲಿ ನಡೆದ ಸಂಗತಿಯೆಲ್ಲವೂ ಗೊತ್ತಾಯಿತು. ಅನಂತರ ಇಂದಿರೆಯು, ಶೋಭನೆಯ ಕೈಯನ್ನು ಆದರದಿಂದ ಹಿಡಿದುಕೊಂಡು, "ತಂಗೆ, ನಿನ್ನ ವಿಷಯವೆಲ್ಲವೂ ನನಗೆ ಮೊದಲೇ ಗೊತ್ತು. ನಿನಗೆ ಊಟವಾಗದಿರುವುದನ್ನು ನೋಡಿ ಎಲ್ಲರೂ ವ್ಯಸನಪಡುವರು. ನಾನಾದರೋ ಬಹಳ ಸಂತೋಷಪಡುವೆನು. ನೀನು ಊಟಮಾಡುವುದಕ್ಕೆ ಕುಳಿತಿದ್ದರೂ, ನಿನಗೆ ಒಂದು ಅಗಳು ಅನ್ನವೂ ನಿನ್ನ ಹೊಟ್ಟೆಗೆ ಹೋಗುತ್ತಿರಲಿಲ್ಲ. ಅಮೃತವನ್ನು ಬಿಟ್ಟು

ಯಾರು ತಾನೇ ಅನ್ನಸಾರವನ್ನು ಕುಡಿಯುವರು? ಯಾವನಲ್ಲಿನ ಆಶೆಯಿಂದ, ಅನೇಕ ಕಷ್ಟಗಳನ್ನು ಹೊಂದಿ, ದಾರುಣವಾದ ಶೋಕಭಾರವನ್ನು ಹೊತ್ತು ಕೊಂಡೆಯೋ, ಅವನೇ ನಿನ್ನಿದಿರಿಗೆ ಬಂದು ನಿಂತಿರುವನು. ಅದಕ್ಕಿಂತಲೂ ನಿನಗೆ ಬೇಕಾದುದೇನು? ಅವನೇ ಜನ್ಮಜನ್ಮದಲ್ಲಿಯೂ ನಿನಗೆ ಪತಿಯಾಗಿರಲಿ; ಅಮೂಲ್ಯ ರತ್ನಪ್ರಾಯನಾದ ಶ್ರೀಯುತ ನರೇಂದ್ರನಾಥಬಾಬುವನ್ನು ನೀನು ಯಾವಜ್ಜೀವವೂ ಕಂಠಾಭರಣವನ್ನಾಗಿ ಧರಿಸು, ಎಂದು ನಾನು ನಿನಗೆ ಆಶೀರ್ವದಿಸುವೆನು." ಹೀಗೆ ಆಶೀರ್ವದಿಸಿ ಇಂದಿರೆಯು ಶೋಭನೆಯನ್ನು ಜತೆಯಲ್ಲಿ ಕರೆದುಕೊಂಡು ಚಂದ್ರಮಾಮನ ಬಳಿಗೆ ಹೋದಳು. ಸ್ವಲ್ಪ ಹೊತ್ತಿನ ಮೇಲೆ ಮತ್ತೊಬ್ಬ ದೂತನು ಬಂದು ನರೇಂದ್ರನನ್ನು ಚಂದ್ರಮಾಮನ ಬಳಿಗೆ ಕರೆದುಕೊಂಡು ಹೋದನು. ಚಂದ್ರಮಾಮನು ಅವನನ್ನು ನೋಡಿ, "ನರೇನ್, ನೀನು ಇಷ್ಟುದಿನವೂ ನನ್ನ ಆಸರೆಯಲ್ಲಿರುವುದು ನನಗೇ ತಿಳಿಯದೇ ಹೋಯಿತು. ನಿನಗೆ ಅನೇಕ ಕಷ್ಟಗಳುಂಟಾಗಿರಬಹುದು. ಅದಕ್ಕಾಗಿ ನಾನು ಬಲು ವ್ಯಸನಪಡುವೆನು. ನೀನು ಅದೆಲ್ಲವನ್ನೂ ಮನಸ್ಸಿಗೆ ತೆಗೆದುಕೊಳ್ಳ ಕೂಡದು. ಈ ದಿನವೇ ನಾವೆಲ್ಲರೂ ಸೇರಿ ನಂದನಪುರಕ್ಕೆ ಹೋಗಬೇಕು. ನಾನು ನಿನ್ನ ಮನೆಗೂ ಶೋಭನೆಯ ಮನೆಗೂ ಈ ಸಂಗತಿಯನ್ನು ಮೊದಲೇ ಹೇಳಿ ಕಳುಹಿಸಿರುವೆನು. ನಿಮ್ಮಿಬ್ಬರಿಗೂ ಜಾಗ್ರತೆಯಾಗಿ ವಿವಾಹ ಸಂಬಂಧವು ಬೆಳೆವುದನ್ನು ನಾವು ನೋಡಿ ಸಂತೋಷಪಡಬೇಕೆಂದಿರುವೆವು," ಎಂದು ಹೇಳಿದನು.

ಹೀಗೆ ಹೇಳಿ ರಮೇಶಬಾಬುವಿಗೆ ತಮ್ಮ ವಿಷಯವನ್ನು ತಿಳಿಸುವುದಕ್ಕೋಸ್ಕರ ಇಬ್ಬರನ್ನು ಮೊದಲೇ ಕಳುಹಿಸಿ ತನ್ನ ಜತೆಯಲ್ಲಿಯೇ ಶೋಭನೆ ಮತ್ತು ನರೇಂದ್ರ ಇವರಿಬ್ಬರನ್ನೂ ಕರೆದುಕೊಂಡು ಹೋಗಲು ತಕ್ಕ ಸನ್ನಾಹಗಳನ್ನು ಮಾಡತೊಡಗಿದನು.

ಎಲ್ಲವೂ ಸಿದ್ಧವಾಯಿತು. ಹೊರಡುವ ಸಮಯದಲ್ಲಿ ಚಂದ್ರಮಾಮನ ಮನಸ್ಸಿಗೆ ಏನೋ ಹೊಳೆಯಿತು. ಅವನು ಆ ಕೂಡಲೆ ಮನೆಯೊಳಗೆ ಹೋಗಿ ಮತ್ತೆ ಹೊರಗೆ ಬಂದನು. ಬಂದವನು ಇಂದಿರೆಯನ್ನು ಕರೆದು, "ನೀನು ಶೋಭನೆಗೆ ಅಲಂಕರಿಸು. ನಾನು ವರನಿಗೆ ಯೋಗ್ಯವಾದ ವೇಷಭೂಷಗಳಿಂದ ನರೇಂದ್ರನನ್ನು ಅಲಂಕರಿಸುವೆನು" ಎಂದನು.

ನರೇಂದ್ರನೂ ಶೋಭನೆಯೂ ಅಲಂಕರಿಸಲ್ಪಟ್ಟರು. ಇಂದಿರೆಯು, ಸರ್ವಾಭರಣಭೂಷಿತೆಯಾಗಿ ಲಕ್ಷ್ಮಿಯಂತೆ ಶೋಭಿಸುತಲಿದ್ದ ಶೋಭನೆಯನ್ನು ನೋಡಿ ಗಟ್ಟಿಯಾಗಿ ನಕ್ಕಳು. ಇದನ್ನು ನೋಡಿ ಚಂದ್ರಮಾಮನೂ ನಕ್ಕನು. ನರೇಂದ್ರನ ಹೃದಯವು ಆನಂದದಿಂದ ತುಂಬಿಹೋಯಿತು.

ಇಂದಿರೆಯು ಶೋಭನೆಯೊಡನೆ ಬಹಳ ಹೊತ್ತು ಮಾತನಾಡಿದಳು. ಶೋಭನೆಗೆ ಅನೇಕ ವಿಧವಾಗಿ ಬುದ್ಧಿವಾದಗಳನ್ನು ಹೇಳಿದಳು. ಶೋಭನೆಯು ಅನುಮತಿಯನ್ನು ಸೂಚಿಸುವ ಸುಂದರವಾದ ಕಟಾಕ್ಷವನ್ನು ಇಂದಿರೆಯ ಮೇಲೆ ಬೀರಿದಳು. ಇಂದಿರೆಯು ಪರಮ ಸಂತೋಷಪಟ್ಟು ಶೋಭನೆಯನ್ನು ಅಪ್ಪಿ ಕೊಂಡಳು. ಶೋಭನೆಯ ಕಣ್ಣುಗಳಿಂದ ಆನಂದಬಾಷ್ಪವು ಸುರಿಯಲಾರಂಭ ವಾಯಿತು.

ಕಾಲಕ್ಕೆ ಸರಿಯಾಗಿ ನಂದನಪುರಕ್ಕೆ ಹೊರಡುವುದಕ್ಕೆ ಗಾಡಿಗಳು ಸಿದ್ಧ ವಾದುವು. ಶೋಭನೆಯು, ನರೇಂದ್ರನು ಇಬ್ಬರೂ ಒಂದು ಗಾಡಿಯಲ್ಲಿ ಕುಳಿತರು. ಉಳಿದವರು ಚಂದ್ರಮಾಮನ ಸಂಗಡ ನಿಂತರು.

ಗಾಡಿಯ ಮೇಲೆ ಕುಳಿತುಕೊಂಡು ಶೋಭನೆಯೂ ನರೇಂದ್ರನೂ ಏನೇನು ಮಾತನಾಡಿದರೋ, ಎಷ್ಟೆಷ್ಟು ಅತ್ತರೋ, ಅವರ ಪರಸ್ಪರ ಸಂತೋಷವು ಯಾವ ವಿಧವಾಗಿ ಪರಿಣಮಿಸಿದ್ದಿತೋ ಅದೆಲ್ಲವನ್ನೂ ಇಲ್ಲಿ ತಿಳಿಸುವುದಕ್ಕೆ ಆಗಲಾರದು. ಒಂದುವೇಳೆ ತಿಳಿಸಿದರೆ, ಗ್ರಂಥಕರ್ತರು ಬೇಜಾರಿಲ್ಲದೆ ಹೇಳಿದುದನ್ನೇ ಹೇಳುವ ರೆಂಬ ಪಾಠಕರ ಅಪವಾದ ಬೇರೆ. ಆದುದರಿಂದ ಇಂತಹ ಸಂದರ್ಭಗಳಲ್ಲಿ ನಮ್ಮ ಪಾಠಕಮಹಾಶಯರ ಊಹೆಗೆ ಆಸ್ಪದವನ್ನು ಕಲ್ಪಿಸಿಕೊಡುವೆವು. ಬೇಕಾ ದವರು ಬೇಕಾದ ಹಾಗೆ ಊಹಿಸಿದರೂ, ಅದು ನಮ್ಮ ಕಥೆಯ ನಾಯಕ ನಾಯಿಕೆ ಯರಲ್ಲಿ ಅತ್ಯುಕ್ತಿಯಾಗಿರಲಾರದೆಂದು ಮಾತ್ರ ನಾವು ಧೈರ್ಯವಾಗಿ ಹೇಳ ಬಲ್ಲವರಾಗಿರುವೆವು.

ಚಂದ್ರಮಾಮನು ಇಂದಿರೆಯನ್ನು ನೋಡಿ "ನಿನಗೂ ಬರುವುದಕ್ಕೆ ಇಷ್ಟವಿರುವಂತೆ ಕಾಣುವುದು" ಎಂದನು. ಇಂದಿರೆಗೆ, ನಂದನಪುರಕ್ಕೆ ಬಂದು ಮದುವೆಯ ಕಾಲದಲ್ಲಿ ವಧೂವರರಿಗೆ ಗುಬ್ಬಿಯನ್ನು ಹೊಡೆಯಬೇಕೆಂದು ಇಷ್ಟ ವಿದ್ದಿತು. ಆದರೆ ಚಂದ್ರಮಾಮನು ಕರೆಯದೆ ತಾನು ಹೋಗುವುದು ಸರಿ ಯಲ್ಲವೆಂದು ತಿಳಿದು ಹಿಂದಿರುಗಿ ಹೊರಟಳು. ಹೊರಡುವುದಕ್ಕೆ ಮುಂಚೆ ಒಂದಾವೃತ್ತಿ ವಧೂವರರನ್ನು ನೋಡಿದಳು. ಇಬ್ಬರೂ ಅಳುತಿದ್ದರು. ಇದನ್ನು ನೋಡಿ, ಇಂದಿರೆಯು, ನರೇಂದ್ರನನ್ನು ಆ ಗಾಡಿಯಿಂದಿಳಿದು ಬೇರೆ ಗಾಡಿ ಯೊಳಗೆ ಕುಳಿತುಕೊಳ್ಳುವಂತೆ ಹೇಳಿದಳು. ನರೇಂದ್ರನು ಯತ್ನವಿಲ್ಲದೆ ಬೇರೆ ಗಾಡಿಯಲ್ಲಿ ಹೋಗಿ ಕುಳಿತುಕೊಂಡನು. ಇಂದಿರೆಯು, ಶೋಭನೆಯನ್ನು ಮುದ್ದಿಟ್ಟುಕೊಂಡು, "ತಂಗೆ, ನಿನ್ನ ಸುಖಕ್ಕೆ ನಾನು ಕುಂದನ್ನುಂಟುಮಾಡಿದೆ ನೆಂದು ತಿಳಿಯಬೇಡ. ನಿಮ್ಮ ಈ ಅಳುವಿನಲ್ಲಿ ಎಂತಹ ಸುಖವಿದೆ ಎಂಬುದನ್ನು ಬಲ್ಲವರೇ ಬಲ್ಲರು. ಆದರೆ ನಾನು ಕಾರಣಾಂತರದಿಂದ ನಿಮ್ಮ ಪ್ರಕೃತ ಸುಖಕ್ಕೆ

ಭಂಗವನ್ನುಂಟುಮಾಡಬೇಕಾಗಿ ಬಂದು ಸೇರಿತು. ಆದುದರಿಂದ ನೀನು ಸ್ವಲ್ಪ ಹೊತ್ತು ಧೈರ್ಯವನ್ನು ತಾಳು" ಎಂದು ಹೇಳುತ ಹೇಳುತ ತಾನೂ ಅಳುವುದಕ್ಕೆ ಪ್ರಾರಂಭ ಮಾಡಿದಳು. ಇದನ್ನು ನೋಡಿ ಚಂದ್ರಮಾಮನು ಅಲ್ಲಿಗೆ ಬಂದನು. ಮತ್ತಿಬ್ಬರೂ ಅಲ್ಲಿಗೆ ಬಂದರು. ಎಲ್ಲರೂ ಒಂದೇ ಗಾಡಿಯಲ್ಲಿಯೇ ಕುಳಿತು ನಂದನಪುರಾಭಿಮುಖವಾಗಿ ತೆರಳಿದರು.

## ಉಪಸಂಹಾರ.

"ನಾಯಕ ನಾಯಿಕೆಯರಿಗೆ ವಿವಾಹವಾಯಿತೆ?" ಎಂದು ಅನೇಕರು ಕೇಳುವರು. ವಿವಾಹವಾಯಿತೋ, ಇಲ್ಲವೋ ಅದು ನಮಗೆ ಗೊತ್ತಿಲ್ಲ. ರಮೇಶ ಬಾಬುವಿನ ಗೃಹವು ಮತ್ತೆ ನಗಲಾರಂಭಿಸಿತು. ಅನೇಕರು ಅಲ್ಲಿಗೆ ಬಂದು ತೃಪ್ತಿಯಾಗಿ ಭೋಜನ ಮುಂತಾದುವನ್ನು ಹೊಂದಿ ಪರಮಾನಂದ ಭರಿತರಾದರು. ಸಾವಿತ್ರಿಗೂ ಮತ್ತು ರಮೇಶಬಾಬುವಿಗೂ ಹೋಗಿದ್ದ ಪ್ರಾಣ ಮತ್ತೆ ಬಂದಿತು. ನರೇಂದ್ರನ ಮಾತಾಪಿತೃಗಳೂ ಅಲ್ಲಿಗೆ ಬಂದು, ಮಹೋತ್ಸವದಲ್ಲಿ ಭಾಗಿಗಳಾದರು. ಆದರೆ ಗ್ರಂಥಕರ್ತರು, ಮತ್ತು ಸ್ತ್ರೀ ಪುರುಷ ಪಾಠಕರು ಮಾತ್ರ ಆ ವಿವಾಹಕ್ಕೆ ಹೋಗಲು ಅನುಕೂಲಿಸಲಿಲ್ಲ.

ಇಂದಿರೆಯು, ವಿವಾಹಮಂಟಪದಲ್ಲಿ ಪ್ರಕಾಶಿಸುತಲಿದ್ದ ವಧೂವರರಿಗೆ ಗುಬ್ಬೀ ಹೊಡೆಯುವುದನ್ನು ಮಾತ್ರ ಮರೆಯದೆ, ಸಾಂಗವಾಗಿ ತನ್ನ ಮನೋರಥವನ್ನು ತೀರಿಸಿಕೊಂಡಳು.

ಚಂದ್ರಮಾಮನ ಕೌಶಲದಿಂದ ಚತುರೆಗೂ, ರಾಧಾನಾಥ ಮತ್ತು ರಾಮದಾಸ ಇವರಿಗೂ ಕಾರಾಗೃಹಪ್ರಾಪ್ತಿಯುಂಟಾಯಿತು. ಉಪೇಂದ್ರನಾರಾಯಣನ ಸಂಪತ್ತೆಲ್ಲವೂ ಅವನ ಜ್ಞಾತಿವರ್ಗದವರ ಹಸ್ತಗತವಾಯಿತು.

ಇಂದಿರೆಯು, ಕೆಲವು ದಿನ ನಂದನಪುರದಲ್ಲಿಯೇ ಇದ್ದು, ಸಾವಿತ್ರೀ-ರಮೇಶ ಬಾಬು, ಶೋಭನೆ ಇವರ ಅಪ್ಪಣೆಯನ್ನು ತೆಗೆದುಕೊಂಡು ಸಲೋಚನೆಯಿದ್ದಲ್ಲಿಗೆ ಬಂದು ಅವಳಿಗೆ ಬೇಕಾದಷ್ಟು ಹಣವನ್ನು ಕೊಟ್ಟಳು. ಅಲ್ಲಿ ಕೆಲವು ದಿನಗಳಿದ್ದು ಅನಂತರ ಚಂದ್ರಮಾಮನ ದಳದಲ್ಲಿ ಬಂದು ಸೇರಿಕೊಂಡಳು.

ಚಂದ್ರಮಾಮನು ಯಾವಾಗಲೂ ಪರಹಿತಕಾರ್ಯದಲ್ಲಿಯೇ ದೀಕ್ಷಿತನಾಗಿ ಕಾಲವನ್ನು ಕಳೆಯುತಿದ್ದನು.

ಸಂಪೂರ್ಣಂ

## ಬಾಲಸರಸ್ವತೀ ಗ್ರಂಥಮಾಲಾ

# ಬಿಕರಿಗೆ ಸಿದ್ಧವಾಗಿರುವ ಗ್ರಂಥಗಳು

೧. ಕಂಠಾಭರಣ .... .... ಬೆಲೆ ೦-೧೨-೦
೨. ಕುಮಾರ ಕಂಠೀರವ .... .... ,, ೦- ೪-೦

## ಪ್ರಭಾವಳಿ

೧. ರಾಣೀ ಚೌಧುರಾಣೀ (ಪ್ರಥಮ ಭಾಗ) ,, ೦-೧೪-೦
೨. ಡಿಟ್ಟೋ (ದ್ವಿತೀಯ ಭಾಗ) (ಮುದ್ರಣದಲ್ಲಿರುತ್ತೆ.)
೩. ಮಹಾರಾಜಸಿಂಹ .... .... ಬೆಲೆ ೧- ೦-೦
೪. ಶೋಭನೆ .... .... .... ,, ೦-೧೦-೦

## ಚಿತ್ರಗುಪ್ತನ ಮೊದಲನೆಯ ದಪ್ತರ

೧. ದುಷ್ಟಚತುಷ್ಟಯ .... .... ಬೆಲೆ ೦- ೫-೦
೨. ಗುರುತುಕಂಡ ಕಳ್ಳ .... .... ,, ೦- ೫-೦
೩. ನರಬಲಿ .... .... .... ,, ೦- ೬-೦

## ಚಿತ್ರಗುಪ್ತನ ಎರಡನೆಯ ದಪ್ತರ

೧. ಪಿಶಾಚ ಪರಿವಾರ .... .... ಬೆಲೆ ೦-೧೦-೦
೨. ಬೆನ್ನಹತ್ತಿದ ಬೇತಾಳ .... .... ,, ೦-೧೨-೦
೩. ಕಮಲಾಕಾಂತನ ಉಯಿಲು .... ,, ೦-೧೨-೦

## ಮಿಂಚಿನ ಗೊಂಚಲಿನಲ್ಲಿ

೧. ಸೌಭಾಗ್ಯ ಸಂಪತ್ಕುಮಾರ .... ಬೆಲೆ ೦- ೬-೦
೨. ಹೆಂಗುಸು—ಎಂದರೆ, ಹೆಂಗುಸು. ,, ೦-೧೨-೦

## ಭಿಲ್ಲನ ಬಾಲ್ಯ

ಮುದ್ರಣಕ್ಕೆ ಸಿದ್ಧವಾಗಿರುವುದು.